**Address for Correspondence**
Kutuhali, C/o Karnataka Science & Technology Academy,
Prof UR Rao Science Centre,
Major Sandip Unnikrishnan Road
Horticultural Sciences College Campus
Near Doddabettahalli Extension Bus Stop
Vidyaranyapura PO, Yalahanka
Bengaluru-560097, Karnataka
Or
Kutuhali, KSTA Office, V-LEAD
CA2, KIADB industrial housing area, Hebbal,
Ring Rd, Mysuru – 570018, Karnataka

**Telephone**
91-9886640328 | 91-080-2972550

**Email**
kutuhalikannada@gmail.com
ksta.gok@gmail.com

**Website**
www.kstacademy.in/kn/kutuhali









# ಹೊಸ ವರ್ಷದೆಡೆಗೆ, ಹೊಸ ಯುಗದೆಡೆಗೆ ನಡೆ



## ನಿರ್ದೇಶಕರ ಮನದಿಂದ

● ನಕುಲ್ ಪರಾಶರ

ಸರಕಾರ ಬೃಹತ್ತಾಗಿ ಲಸಿಕೆಗಳನ್ನು ನೀಡಲು ಕೈಗೊಂಡ ಕಾರ್ಯಕ್ರಮ, ಹಾಗೂ ಈಗ ಬೂಸ್ಟರ್ ಲಸಿಕೆಗಳನ್ನು ನೀಡುತ್ತಿರುವ ಕ್ರಮಗಳ ಕೃಪೆ, ಬದುಕು ಎಂದಿನೆಡೆಗೆ ಮರಳುತ್ತಿರುವುದು ಖುಷಿ ತಂದಿದೆ. ಚೀನಾ ಹಾಗೂ ಕೊರಿಯಾದಲ್ಲಿ ಕೋವಿಡ್ಡಿನ ಹೊಸಬಗೆಗಳು ಕಾಣಿಸಿಕೊಂಡ ಸುದ್ದಿ ಜಾಗೃತೆಯಿಂದಿರಲು ಎಚ್ಚರಿಸಿದೆ. ಏಕೆಂದರೆ ಎರಡು ವರ್ಷಗಳ ಹಿಂದೆ ಇದೇ ಸಮಯದಲ್ಲಿ ಕೋವಿಡ್ ರೋಗದಿಂದಾದ ಗಾಯಗಳು ಇನ್ನೂ ಮಾಗಿಲ್ಲವಷ್ಟೆ. ಹೀಗಾಗಿ ಈ ಎಚ್ಚರಿಕೆ. ಆದ್ದರಿಂದ ಮುಖಗವುಸುಗಳನ್ನು ಈಗಲೇ ಬಿಸಾಡಬೇಡಿ. ಕೈ ತೊಳೆಯುವುದನ್ನು ನಿಲ್ಲಿಸಬೇಡಿ. ವೈಯಕ್ತಿಕ ಅಂತರವನ್ನು ಕಾಯ್ದುಕೊಳ್ಳುವುದನ್ನು ಬಿಡಬೇಡಿ. ಇವೆಲ್ಲವೂ ನಮ್ಮ ಒಳಿತಿಗಾಗಿಯಷ್ಟೆ. ಜೊತೆಗೆ ಇವು ಸ್ವಚ್ಛತೆಯ ಅಭ್ಯಾಸವನ್ನೂ ಮೈಗೂಡಿಸುತ್ತವೆ. ಕೋವಿಡ್ ಸಂಬಂಧಿಸಿದ ಮಾಹಿತಿಗಳ ಕಡೆ ಕಣ್ಣಿರಲಿ. ಸಾಧ್ಯವಾದರೆ ಪ್ರಸ್ತುತವೆನ್ನಿಸುವ ಹಾಗೂ ಸತ್ಯವಾದ ಮಾಹಿತಿಯನ್ನು ನೆರೆಹೊರೆಯಲ್ಲಿ ನೀಡುತ್ತಿರಿ. ವಿಜ್ಞಾನ ಸಂವಹನದ ಶಕ್ತಿಯೇ ಅದು. ಕನಿಷ್ಠ ಮಾಹಿತಿಯನ್ನು ನಾವು ಯಾರು ಬೇಕಾದರೂ ಸಂವಹಿಸಬಹುದು.

ಋತು ಬದಲಾದ ಹಾಗೆ ಸಮಯವೂ ಬದಲಾಗುತ್ತಿದೆ. ಈ ವರ್ಷವಂತೂ ನಿತ್ಯದ ತಾಪಮಾನ ಕಳೆದ ಎರಡು ವರ್ಷ ಇದ್ದಂತಿಲ್ಲ. ಬದಲಾಗಿದೆ. ಮಾರ್ಚ್ 22 ರಂದು ಸಂಕ್ರಮಣವೂ ಆಯಿತು. ಇದು ಭಾರತೀಯ ಪಂಚಾಂಗದ ಪ್ರಕಾರ ಹೊಸವರ್ಷದ ಆರಂಭ. ವಿಕ್ರಮ ಶಕೆ 1944ರ ಪ್ರಾರಂಭ. 1957ನೇ ಇಸವಿಯಲ್ಲಿ ಭಾರತೀಯ ಪಂಚಾಂಗ ಪರಿಷ್ಕರಣಾ ಸಮಿತಿಯು ಸುಪ್ರಸಿದ್ಧ ಖಭೌತವಿಜ್ಞಾನಿ ಡಾ. ಮೇಘನಾ ದಸಹಾರವರ ನೇತೃತ್ವದಲ್ಲಿ ಅವಿರತವಾಗಿ ಶ್ರಮಿಸಿ, ಆಗ ಭಾರತದ ವಿವಿಧ ಭಾಗಗಳಲ್ಲಿ ಚಾಲ್ತಿಯಲ್ಲಿದ್ದ ವಿಭಿನ್ನ ಪಂಚಾಂಗಗಳಲ್ಲಿನ ಅಮೋಘ ಅಂಶಗಳನ್ನು ಒಟ್ಟು ಗೂಡಿಸಿ ಸಮಗ್ರವಾದೊಂದು ಪಂಚಾಂಗವನ್ನು ನೀಡಿತು. "ದೇಶದಲ್ಲಿ ಪ್ರಸ್ತುತ ಅನುಸರಿಸಲಾಗುತ್ತಿರುವ ಎಲ್ಲ ಪಂಚಾಂಗಗಳನ್ನೂ ಪರಿಶೀಲಿಸಿ, ವೈಜ್ಞಾನಿಕ ಅಧ್ಯಯನಗಳ ನಂತರ, ಭಾರತಕ್ಕೆ ಯೋಗ್ಯವಾದ ಸಮಗ್ರವಾದ ಹಾಗೂ ನಿಖರವಾದೊಂದು ಪಂಚಾಂಗದ ಪ್ರಸ್ತಾವನೆಯನ್ನು ಸಲ್ಲಿಸುವುದು," ಆ ಸಮಿತಿಗೆ ನೀಡಿದ ಗುರಿಯಾಗಿತ್ತು. ಏಪ್ರಿಲ್ 2 ರಂದು ದೇಶದ ವಿವಿಧ ಭಾಗಗಳಲ್ಲಿ ಗುಡಿಪರ್ವ, ಯುಗಾದಿ, ಚೈತ್ರ ಪ್ರತಿಪಾದವೇ ಮೊದಲಾದ ಹೊಸವರ್ಷದ ಹಬ್ಬವನ್ನು ಆಚರಿಸುತ್ತಿರುವ ಈ ಸಂದರ್ಭದಲ್ಲಿ – http://bharatcalendar.in ಎನ್ನುವ ಜಾಲತಾಣವೊಂದು ಆರಂಭವಾಗಲಿದೆ. ಇದರಲ್ಲಿ ಉಜ್ಜಯಿನಿಯ ಸಮೀಪದಲ್ಲಿರುವ ಡೋಂಗ್ಲಾ ಎಂಬಲ್ಲಿ ಭಾರತೀಯ ರಾಷ್ಟ್ರೀಯ ಪಂಚಾಂಗ ಕುರಿತ ಎರಡು ದಿನಗಳ ಸಮಾವೇಶದ ಬಗ್ಗೆ ಭರಪೂರ ಮಾಹಿತಿ ಇದೆ.

ವಿಜ್ಞಾನ ಪ್ರಸಾರದಲ್ಲಿ ನಮಗೆ ಹೊಸ ಆರ್ಥಿಕ ವರ್ಷ ಆರಂಭವಾಗಿದೆ. ಇದು ಸ್ಕೋಪ್ – ವಿಜ್ಞಾನ ಸಂವಹನೆ, ಜನಪ್ರಿಯ ವಿಜ್ಞಾನ ಹಾಗೂ ವಿಜ್ಞಾನ ವಿಸ್ತರಣೆಯ ಕ್ಷೇತ್ರದಲ್ಲಿ ಹಲವು ವಿಶಿಷ್ಟ ಯೋಜನೆಗಳು ಹಾಗೂ ಕಾರ್ಯಕ್ರಮಗಳ ವರ್ಷ. ಮಧ್ಯಪ್ರದೇಶ ಹಾಗೂ ಪಶ್ಚಿಮ ಬಂಗಾಳದ ಸಹಯೋಗಿಗಳ ಜೊತೆಯಲ್ಲಿ ನಾವು ಜನಸಾಮಾನ್ಯರ ಅನುಕೂಲಕ್ಕಾಗಿ ಹಲವಾರು ಉತ್ಪನ್ನಗಳು ಹಾಗೂ ಮಾಹಿತಿ ಆಕರಗಳನ್ನು ರೂಪಿಸಬೇಕೆಂದಿದ್ದೇವೆ. ಈ ಎಲ್ಲವೂ ಅಲ್ಲಿ ನುಡಿಯುವ ಭಾಷೆಯಲ್ಲಿಯೇ ಇರಲಿವೆ ಎನ್ನುವುದು ವಿಶೇಷ. ನಮ್ಮ ಪತ್ರಿಕೆ ಡ್ರೀಮ್ 2047 ಸುದೀರ್ಘ ಕಾಲದಿಂದ ಓದುಗರಿಗೆ ಸೇವೆಸಲ್ಲಿಸುತ್ತಿದೆ. ಈ ಪತ್ರಿಕೆಯ ಸ್ವರೂಪವೂ ಬದಲಾಗಬೇಕಾಗಿದೆ. ಇನ್ನಷ್ಟು ಲೇಖನಗಳನ್ನು ಒಳಗೊಳ್ಳುವಷ್ಟು ಅದು ದೊಡ್ಡದಾಗಬೇಕಿದೆ.

> ನಾವು ಈಗ ಸ್ಕೋಪ್ ಕಾರ್ಯಕ್ರಮದಲ್ಲಿ ಇತರೆ ಭಾಷೆಗಳ ಜೊತೆಗೆ ಡೋಗ್ರಿ ಮತ್ತು ಪಂಜಾಬಿ ಭಾಷೆಗಳನ್ನೂ ಕೂಡಿಸಿಕೊಳ್ಳಲು ತಯಾರಿ ನಡೆಸಿದ್ದೇವೆ. ಈ ಸರದಿಯಲ್ಲಿ ಒಡಿಯಾ, ಮಲಯಾಳಂ ಮತ್ತು ನೇಪಾಳಿ ಭಾಷೆಗಳೂ ಈ ವರ್ಷದಲ್ಲಿ ಸೇರ್ಪಡೆಯಾಗುವುದು ನಿಶ್ಚಿತ. ವಿಜ್ಞಾನ ಸಂವಹನದ ಇನ್ನೊಂದು ಪ್ರಮುಖ ಮಾಧ್ಯಮವೆಂದರೆ ನಾಟಕಗಳು. ನಾಟಕಗಳನ್ನೂ ಸ್ಕೋಪ್ ಕಾರ್ಯಕ್ರಮದಲ್ಲಿ ಸೇರಿಸಲು ನಾವು ಉದ್ಯುಕ್ತರಾಗಿದ್ದೇವೆ

ಇಂದಿನ ಬದಲಾವಣೆಗಳಿಗೆ ತಕ್ಕಂತೆ ಮಾರ್ಪಾಡಾಗಬೇಕಿದೆ. ನಾವು ಈಗ ಸ್ಕೋಪ್ ಕಾರ್ಯಕ್ರಮದಲ್ಲಿ ಇತರೆ ಭಾಷೆಗಳ ಜೊತೆಗೆ ಡೋಗ್ರಿ ಮತ್ತು ಪಂಜಾಬಿ ಭಾಷೆಗಳನ್ನೂ ಕೂಡಿಸಿಕೊಳ್ಳಲು ತಯಾರಿ ನಡೆಸಿದ್ದೇವೆ. ಈ ಸರದಿಯಲ್ಲಿ ಒಡಿಯಾ, ಮಲಯಾಳಂ ಮತ್ತು ನೇಪಾಳಿ ಭಾಷೆಗಳೂ ಈ ವರ್ಷದಲ್ಲಿ ಸೇರ್ಪಡೆಯಾಗುವುದು ನಿಶ್ಚಿತ. ವಿಜ್ಞಾನ ಸಂವಹನದ ಇನ್ನೊಂದು ಪ್ರಮುಖ ಮಾಧ್ಯಮವೆಂದರೆ ನಾಟಕಗಳು. ನಾಟಕಗಳನ್ನೂ ಸ್ಕೋಪ್ ಕಾರ್ಯಕ್ರಮದಲ್ಲಿ ಸೇರಿಸಲು ನಾವು ಉದ್ಯುಕ್ತರಾಗಿದ್ದೇವೆ.

ಕನ್ನಡದಲ್ಲಿ ಈಗಾಗಲೇ ನಾಟಕದ ಮೂಲಕ ವಿಜ್ಞಾನದ ಚರ್ಚೆಯನ್ನು ಮಾಡುವ ಕಾರ್ಯವನ್ನು ಕುತೂಹಲಿ ಈಗಾಗಲೇ ಆರಂಭಿಸಿದ್ದು, ರಿಚರ್ಡ್ ಫೈನ್ಮನ್ನನ ಬದುಕು-ವಿಚಾರಗಳನ್ನು ಆಧರಿಸಿದ ಕ್ಯೂ.ಇ.ಡಿ. ಯನ್ನು ಹನ್ನೆರಡುಬಾರಿ ಪ್ರದರ್ಶಿಸಲಾಗಿದೆ. ಇದೀಗ ಹಲವು ತಂಡಗಳು ದೇಶದ ಮೊತ್ತಮೊದಲ ರಾಷ್ಟ್ರಮಟ್ಟದ ವಿಜ್ಞಾನ ನಾಟಕೋತ್ಸವವನ್ನು ಮಾಡುವ ಪ್ರಸ್ತಾವನೆಯನ್ನು ಇಟ್ಟಿವೆ.



ನಾಳಿನ ದಿನಗಳಲ್ಲಿ ಇನ್ನೂ ಬಹಳಷ್ಟು ಹೊಸ ವಿಷಯಗಳನ್ನು ಹೇಳಲಿದೆ. ಇವೆಲ್ಲದರ ನಡುವೆ ನಾವು ಕೋವಿಡ್ ಸುರಕ್ಷತಾ ಕ್ರಮಗಳನ್ನು ಮರೆಯದಿರೋಣ. ಸುರಕ್ಷತೆಯಿಂದ ಇರೋಣ.

**ಯುಗಾದಿಯ ಶುಭಾಶಯಗಳು**

# ಚಂದ್ರಾ ಲೇಔಟ್ನಲ್ಲಿ ಉಲ್ಟಾ ರಾಕೆಟ್ ಉಡಾವಣೆ

ನಾಗೇಶ ಹೆಗಡೆ

ಆಂಜನಪ್ಪನ ಸವಾರಿ ಬಂತು. ಅವನ ಹಳೇ ಸ್ಕೂಟರಿನ ಸದ್ದು ಅರ್ಧ ಕಿಲೊಮೀಟರಿನಿಂದಲೇ ಗೊತ್ತಾಗುತ್ತಿತ್ತು. ಸಸಿಗಳ ಮಧ್ಯೆ ಪಾತಿ ಮಾಡುತ್ತಿದ್ದ ನನ್ನ ಬಳಿಯೇ ಸ್ಕೂಟರನ್ನ ಸೀದಾ ತಂದು ನಿಲ್ಲಿಸಿ ಇಳಿದ. ಬಣ್ಣದ ಕಾಗದದಲ್ಲಿ ಸುತ್ತಿದ ಅದೇನೋ ಆತನ ಸ್ಕೂಟರಿನ ಡಿಕ್ಕಿಯಿಂದ ಮೂತಿಯನ್ನು ಹೊರಚಾಚಿತ್ತು.

'ಏನಯ್ಯಾ ಎಲ್ಲಿಂದ ಬಂತು ಸವಾರಿ? ಅದೇನು ಡಿಕ್ಕೀಲಿ?' ಕೇಳಿದೆ.

'ಹೆಚ್ಚೆ ಅಂತ ಏನೂ ಇಲ್ಲ. ಇದು ಮಾಡ್ಲು ಸಾರ್, ರಿಗ್ ಮಷೀನ್ ಮಾಡ್ಲು! ಉಗ್ರಪ್ಪನ ದೇವುಸ್ತಾನಕ್ಕೆ ವೋಗಿದ್ದೆ? ಎನ್ನುತ್ತ ತಾನೂ ನನ್ನ ಪಕ್ಕದಲ್ಲಿ ಕುಕ್ಕರಗಾಲಿನಲ್ಲಿ ಕೂತು ಪ್ರಸಾದದ ಪೊಟ್ಟಣ ಬಿಚ್ಚತೊಡಗಿದ.

ಈ ಆಂಜನಪ್ಪ ಕೆಂಗೇರಿ ಆಚೆ ರಾಮಸಂದ್ರದಲ್ಲಿ ಚೂರುಪಾರು ಸಿವಿಲ್ ಕಾಂಟ್ರಾಕ್ಟ್ ಅಂತ ಏನೋ ಮಾಡಿಕೊಂಡಿದ್ದವ. ಅಲ್ಲೇ ಸಮೀಪದ ನಮ್ಮ ತೋಟದಲ್ಲಿ ಶೆಡ್ ಕಟ್ಟಿಸುವಾಗ ಜಲ್ಲಿಕಲ್ಲು, ಬೌಲ್ಡರ್, ಬೇಲಿ ಕಟ್ಟುವ ಕೂಚ ಇತ್ಯಾದಿ ಸಪ್ಲೈ ಮಾಡುವ ಗುತ್ತಿಗೆ ಪಡೆದಿದ್ದ. ತನ್ನ ಜೊತೆಗೆ ಮಗ ದಿನೇಶನನ್ನೂ ಆಗೀಗ ಕರೆತರುತ್ತಿದ್ದ. ಆಗಿನ್ನೂ ಮೀಸೆ ಚಿಗುರದ ಆ ಹುಡುಗನಿಗೆ ನಾನು ಚಿಕ್ಕ ಪುಟ್ಟ ಕತೆ ಪುಸ್ತಕಗಳನ್ನೂ ವಿಜ್ಞಾನ ಪತ್ರಿಕೆಗಳನ್ನೂ ಕೊಡುತ್ತಿದ್ದೆ. ಅವನ ಸ್ಕೂಲಿನ ಯಾವುದೋ ವಿಜ್ಞಾನ ಪ್ರದರ್ಶನಕ್ಕೆ ನಾನು ಸೂಚಿಸಿದ್ದ ಕ್ಯಾಪಿಲ್ಲರಿ ಪ್ರಯೋಗದ ಮಾಡೆಲ್ ರೂಪಿಸಿ ಅದಕ್ಕೆ ಬಹುಮಾನ ಕೂಡ ಪಡೆದಿದ್ದ. ಅದು ಹೋದ ವರ್ಷದ ಕತೆ.

ಬಣ್ಣದ ಕಾಗದದಲ್ಲಿ ಸುತ್ತಿದ್ದು 'ಮಾಡ್ಲು ಮಾಡ್ಲು' ಅಂದಾಗ ನನಗೆ ಅರ್ಥವಾಯಿತು. ಈಗ ಹೈಸ್ಕೂಲ್ ಓದುತ್ತಿದ್ದ ಇವನ ಮಗನ ಯಾವುದೋ ಮಾಡೆಲ್ ಇರಬೇಕು ಅಂದುಕೊಂಡೆ. ಆದರೆ ಕೊಳವೆ ಬಾವಿ ಕೊರೆಯುವ ರಿಗ್‌ಯಂತ್ರದ ಮಾಡೆಲ್?

'ಏನಯ್ಯಾ' ತುಸು ಬಿಡಿಸಿ ಹೇಳು' ಅಂದೆ.

ಆಂಜನಪ್ಪ ಎದ್ದು ಸ್ಕೂಟರಿನಲ್ಲಿದ್ದ ಪ್ಯಾಕೆಟ್ಟನ್ನು ಬಿಡಿಸುತ್ತ ಬಂದ. ಬೋರ್‌ವೆಲ್ ಲಾರಿಗಳ ಮೇಲೆ ಮಲಗಿರುವ ರಿಗ್

**ದೇವರ ಆಶೀರ್ವಾದ ಪಡೆದು ಗಗನ ನೌಕೆಗಳು ಮೇಲಕ್ಕೆ ಹೋಗುವುದಾದರೆ, ಕೆಳಮುಖ ಸಾಗಬೇಕಾದ ಬೋರ್‌ವೆಲ್ ಡ್ರಿಲ್ ಬಿಟ್‌ಗಳಿಗೂ ಅದೇ ದೇವರು ಕೃಪೆ ತೋರಲಾರನೆ...?**

ಯಂತ್ರದ್ದೇ ಅಸಡಾಬಸಡಾ ಪ್ರತಿರೂಪ ಅದಾಗಿತ್ತು. ಮೊಣಕೈ ಉದ್ದ ಇತ್ತು. ಅದನ್ನು ಆತ ಒಮ್ಮೆ ನೇರ ನಿಂತಂತೆ ಹಿಡಿದು, ಮತ್ತೊಮ್ಮೆ ಹುಷಾರಾಗಿ ತಲೆ ಕೆಳಗು ಮಾಡುತ್ತ,

'ಸಿಟೀನಾಗೆ ದೊಡ್ಡೇಗೌಡ್ರ ಸೈಟು ಐತಲ್ಲಾ ಸಾರ್. ಅದ್ರಾಗೆ ಕೊಳವೆ ಬಾವಿ ಕೊರೆಸೋಕೆ ಹೋಗಿದ್ದೊ' ಎನ್ನುತ್ತ ಮಾಡೆಲ್ಲಿನ ಕತೆ ಹೇಳಿದ.

ನಗರದ ಆ ಸೈಟಿನಲ್ಲಿ ಕೊಳವೆ ಬಾವಿ ಕೊರೆಸಲು ಹೋಗಿ ನಾಲ್ಕುನೂರು ಅಡಿ ಕೊರೆದರೂ ನೀರು ಸಿಗದೆ, ಡ್ರಿಲ್ ಬಿಟ್ ತುಂಡಾಗಿ ವಿಫಲವಾಗಿತ್ತಂತೆ. ಅದು ದೇವಮೂಲೆ ಆಗಿದ್ದರಿಂದ ಹಾಗಾಯ್ತೆಂದು ಯಾರೋ ವಾಸ್ತು ತಜ್ಞರು ಹೇಳಿದ್ದರಂತೆ. ಅವರ ಸಲಹೆಯ ಪ್ರಕಾರ ಇನ್ನೊಂದು ಮೂಲೆಯಲ್ಲಿ ಕೊರೆಸಿದ್ದೂ ವಿಫಲವಾಗಿತ್ತು. ಅದು ಅಗ್ನಿಮೂಲೆ ಎಂದು ಮತ್ಯಾರೋ ಹೇಳಿರಬೇಕು. ಮೂರನೆಯದನ್ನು ಕೊರೆಸಲು ಸಿದ್ಧತೆ ನಡೆದಿತ್ತು. ಅದಕ್ಕೆ?

'ಅದ್ಕೇ ಸಾರ್, ಈ ಬಾರಿ ಫೇಲ್ ಆಗಬಾರದೂ ಅಂತ ಉಗ್ರನರಸಿಂಹ ದೇವರಿಗೆ ಹರಕೆ ಕಟ್ಟೋಣಾಂತ...'

'ಯಾರು ಕೊಟ್ರು ಈ ಐಡಿಯಾನ, ದಿನೇಶ ಕೊಟ್ಟನಾ?' ಕೇಳಿದೆ.

'ಛೆ, ದಿನೇಶ ಇನ್ನೂ ಚಿಕ್ಕವ. ಅವನಿಗೆ ಇಂಥ ಐಡಿಯಾ ಬರೋ ವಯಸ್ಸಲ್ಲ ಬಿಡಿ. ಆದರೆ ಟೀವಿಲಿ ತೋರಿಸಿದ್ರಲ್ಲ? ಅದೇನೋ ಚಂದ್ರಯಾನ ಯಶಸ್ವಿ ಆಗಲೀ ಅಂತ ರಾಕೆಟ್ ಮಾಡೆಲ್ಲನ್ನ ಹಿಸ್ರೋ ಸೈಂಟಿಸ್ಟು ತಿರುಪತಿಗೆ ಒಯ್ದಿದ್ರಂತೆ... ಅದಕ್ಕೇ ದಿನೇಶಂಗೆ ಹೇಳಿ ಅಂಥದೇ ರಿಗ್ ಮಷಿನ್ ಮಾಡೆಲ್ ಮಾಡಿಸಿಬಿಟ್ಟೆ' ಅಂದ ಆಂಜನಪ್ಪ.

ನಾನು ತಿದ್ದಿದೆ: 'ಚಂದ್ರಯಾನ ಮಾಡೆಲ್ಲನ್ನ ಇಸ್ರೋ ವಿಜ್ಞಾನಿಗಳು ತಿರುಪತಿಗೆ ಅಲ್ಲ, ಉಡುಪಿಗೆ ಒಯ್ದಿದ್ರು; ಕೊಲ್ಲೂರಿಗೆ ಒಯ್ದಿದ್ರು. ಅದಕ್ಕೂ ಹಿಂದೆ ತಿರುಪತಿಗೆ ಒಯ್ದಿದ್ದು ಮಂಗಳಯಾನದ ಮಾಡೆಲ್ಲು' ಅಂದೆ.

'ಯಾವುದೋ... ಅಂತೂ ದೇವರ ಹತ್ತರ ಹೋಗಿದ್ದಕ್ಕೇ ಆ ರಾಕೆಟ್ಟು ಸಕ್ಸೆಸ್ ಆಯ್ತಲ್ಲ ಸಾರ್' ಅಂದ.

'ಅದು ರಾಕೆಟ್ ಅಲ್ಲಯ್ಯಾ! ರಾಕೆಟ್ ತುದಿಯಲ್ಲಿ ಕೂರಿಸುವಂಥ ಲ್ಯಾಂಡರ್ ನೌಕೆಯ ಮಾಡೆಲ್ಲು' ಎಂದೆ.

ಆಂಜನಪ್ಪ ಮಿಕಮಿಕ ನೋಡಿದ. ಮಣ್ಣಾಗಿದ್ದ ನನ್ನ ಕೈಯನ್ನು ಒರೆಸಿಕೊಂಡೆ. ಅವನು ಕೆಳಮುಖ ಮಾಡಿ ಹಿಡಿದಿದ್ದ ಮಾಡೆಲ್ಲನ್ನು ನಾನು ಉಲ್ಟಾ ತಿರುಗಿಸಿ, ಅದರ ಮೂತಿಯನ್ನು ಆಕಾಶಕ್ಕೆ ಹಿಡಿದು, ಯಾವುದು ರಾಕೆಟ್ ಭಾಗ, ಯಾವುದು ಗಗನನೌಕೆಯ ಭಾಗ ಎಂದೆಲ್ಲ ವಿವರಿಸಲು ಹೊರಟೆ.

ಮೇಲಕ್ಕೆ ತಿರುಗಿಸುವಾಗ ಮಾಡೆಲ್ನ ಅರ್ಧಭಾಗ ಕಳಚಿ ಬಿತ್ತು. ನನ್ನ ಕೈಯಲ್ಲಿ ಅದರ ಮುಕುಟ ಮಾತ್ರ ಉಳಿದಿತ್ತು. ಆಂಜನಪ್ಪ ಗಡಬಡಿಸಿ, ಈ ಮಾಡೆಲ್ಲನ್ನು ಮಾಡಿಕೊಟ್ಟ ಮಗ ದಿನೇಶನಿಗೆ ಬಯ್ಯುತ್ತ, ಸ್ಕೂಟರ್ ಬಳಿ ಓಡಿ, ಗಮ್ಟೇಪ್ ಹುಡುಕಲು ಡಿಕ್ಕಿಯಲ್ಲಿ ತಡಕಾಡುತ್ತಿದ್ದ.

'ಇರಲಿ ಬಾ, ಈಗ ನಿನಗೆ ಸರಿಯಾಗಿ ಅರ್ಥ ಆಗೋ ಹಾಗೆ ಹೇಳ್ತೀನಿ' ಎಂದು ಕರೆದೆ. ಆಕಾಶಕ್ಕೆ ಹೋಗುವಾಗ ಕೆಳಗಿನ ಅರ್ಧ ಭಾಗ ಹೇಗೂ ಕಳಚಿ ಬೀಳುತ್ತದೆ, ಮೇಲಿನ ಭಾಗ ಮಾತ್ರ ಚಂದ್ರನ ಕಡೆ ಹೋಗುತ್ತದೆ ಎಂದೆ.

'ಹೌದಾ ಸಾರ್, ಹಂಗಾದ್ರೆ ಒಳ್ಳೇ ಸಕುನ ಆದಂತಾಯ್ತಲ್ಲ' ಅಂದ ಆಂಜನಪ್ಪ.

'ಶಕುನ ಗಿಕುನ ಏನಲ್ಲ, ಮೇಲಕ್ಕೆ ಎತ್ತಿದರೆ ಅದು ಕಳಚಿ ಬೀಳೋ ಹಾಗೆ ದಿನೇಶನೇ ಮಾಡಿರಬೇಕು; ಜಾಣ ಹುಡುಗ ಅವನು' ಎಂದೆ.

ಮತ್ತೆ ಆಂಜನಪ್ಪ ಮಿಕಮಿಕ ನೋಡಿದ. ಈ ಬಾರಿ ಅವನ ಮುಖದಲ್ಲಿ ಮಗನ ಜಾಣತನದ ಬಗ್ಗೆ ಹೆಮ್ಮೆ ಇದ್ದಂತಿತ್ತು. ನಾನು ಇನ್ನಷ್ಟು ವಿವರಿಸಲು ಯತ್ನಿಸಿದೆ: 'ಇಸ್ರೊ ಅಧ್ಯಕ್ಷರು ಕೊಲ್ಲೂರಿಗೆ ಒಯ್ದಿದ್ದು ಇಡೀ ರಾಕೆಟ್ಟನ್ನಲ್ಲ, ಅದರ ಮೂತಿಯಲ್ಲಿ ಕೂತಿರೋ ಲ್ಯಾಂಡರಿನ ಭಾಗವನ್ನು ಮಾತ್ರ ಮೂಕಾಂಬಿಕೆ ದೇವಿಯ ಎದುರು ಇಟ್ಟಿದ್ದರು' ಎಂದೆ. 'ಅದು ಸಕ್ಸೆಸ್ ಆಗಲಿಲ್ಲ' ಎಂಬ ಮಾತನ್ನೂ ಸೇರಿಸಿದೆ.

**ಮತ್ತೆ ಆಂಜನಪ್ಪ ಮಿಕಮಿಕ ನೋಡಿದ. ಈ ಬಾರಿ ಅವನ ಮುಖದಲ್ಲಿ ಮಗನ ಜಾಣತನದ ಬಗ್ಗೆ ಹೆಮ್ಮೆ ಇದ್ದಂತಿತ್ತು. ನಾನು ಇನ್ನಷ್ಟು ವಿವರಿಸಲು ಯತ್ನಿಸಿದೆ: ಇಸ್ರೊ ಅಧ್ಯಕ್ಷರು ಕೊಲ್ಲೂರಿಗೆ ಒಯ್ದಿದ್ದು ಇಡೀ ರಾಕೆಟ್ಟನ್ನಲ್ಲ, ಅದರ ಮೂತಿಯಲ್ಲಿ ಕೂತಿರೋ ಲ್ಯಾಂಡರಿನ ಭಾಗವನ್ನು ಮಾತ್ರ ಮೂಕಾಂಬಿಕೆದೇವಿಯ ಎದುರು ಇಟ್ಟಿದ್ದರು ಎಂದೆ. ಅದು ಸಕ್ಸೆಸ್ ಆಗಲಿಲ್ಲ ಎಂಬ ಮಾತನ್ನೂ ಸೇರಿಸಿದೆ.**

'ಮತ್ತೆ ಟೀವೀಲಿ ತೋರಿಸಿದ್ರಲ್ಲ' ರಾಕೆಟ್ ಉಡಾವಣೆ ಯಶಸ್ವಿ ಆಯ್ತು ಅಂತ? ಎಂದ ಆಂಜನಪ್ಪ. ಅವನ ಹಣೆಯ ಮೇಲೆ ಚಿಂತೆಯ ಗೆರೆಗಳು ಮೂಡತೊಡಗಿದ್ದವು.

'ಹೌದಪ್ಪಾ, ರಾಕೆಟ್ ಮೇಲಕ್ಕೆ ಯಶಸ್ವಿಯಾಗಿ ಏರಿದ್ದು ಹೌದು. ಯಾಕಂದ್ರೆ ಅದನ್ನ ದೇವರ ಹತ್ರ ಒಯ್ದಿರಲೇ ಇಲ್ಲ. ಅದಕ್ಕೆ ದೇವರ ಆಶೀರ್ವಾದ ಬೇಕಿರಲಿಲ್ಲ; ವಿಜ್ಞಾನಿಗಳ ಆತ್ಮವಿಶ್ವಾಸ ಮಾತ್ರ ಸಾಕಾಗಿತ್ತು' ಅಂದೆ.

'ಮತ್ತೆ ದೇವರ ಹತ್ರ ಹೋಗಿ ಹರಕೆ ಮಾಡಿಸಿದ್ದು?' ಆಂಜನಪ್ಪ ಮುಖ್ಯ ಪಾಯಿಂಟಿಗೆ ನನ್ನನ್ನ ಎಳೆತಂದ. ಅವನಿಗೆ ತೀರ ನಿರಾಸೆ ಉಂಟುಮಾಡಲು ಯಾಕೋ ಮನಸ್ಸು ಬರಲಿಲ್ಲ.

'ಅದರ ಹೆಸರು ವಿಕ್ರಮ್. ಅದೂ ಸುಮಾರು ಸಕ್ಸೆಸ್ಸೇ ಅನ್ನು. ಚಂದ್ರನ ಸುತ್ತ ರೌಂಡ್ ಹಾಕಿದ್ದು ಸಕ್ಸೆಸ್ಸೇ... ಆಮೇಲೆ ಕೆಳಕ್ಕೆ ಇಳೀತು? ಅಂದೆ. ಆ ಲ್ಯಾಂಡರ್ ನೌಕೆ ನಿಯಂತ್ರಣ ತಪ್ಪಿ, ಚಂದ್ರನ ನೆಲದ ಕಡೆ ಸಾಗಿ ಎಲ್ಲೋ ಮಾಯವಾಗಿದ್ದನ್ನು ಅವನಿಗೆ ಹೇಳಲಿಲ್ಲ.

ಅಷ್ಟು ಸಾಕಾಗಿತ್ತು ಅವನಿಗೆ. ಅಂತೂ ಆ ಯಂತ್ರ ಕೆಳಮುಖ ಸಾಗಿದ್ದೇ ಅವನಿಗೆ ತೃಪ್ತಿ ಕೊಟ್ಟಂತಿತ್ತು. ಅವನ ಸಂಗಾತಿಯ ಬೋರ್ವೆಲ್ ಯಂತ್ರ ಕೂಡ ಕೆಳಮುಖ ಸರ್ರಂತ ಸಾಗಬೇಕು, ಎಲ್ಲೂ ಡ್ರಿಲ್ ಬಿಟ್ ತುಂಡಾಗದೆ ಸುಸೂತ್ರವಾಗಿ ಆಳಕ್ಕೆ ಇಳೀಬೇಕು ಅನ್ನೋದೇ ಅವನ ಆಸೆಯಾಗಿತ್ತು. 'ದೇವ್ರಿದ್ದಾನೆ ಬಿಡಿ, ಈ ಬಾರಿ ನೀರು ಬೀಳೋದು ಗ್ಯಾರಂಟಿ' ಎನ್ನುತ್ತ ಮೇಲಕ್ಕೆದ್ದ.

'ಎಲ್ಲಿದೆ ದೊಡ್ಡೇಗೌಡರ ಸೈಟು?' ಕೇಳಿದೆ.

'ಅಲ್ಲೇ ನಾಗರಬಾವಿ ತಾವ ಚಂದ್ರಾ ಲೇಔಟಲ್ಲಿ ಸಾರ್? ಎನ್ನುತ್ತ ತನ್ನ ಮಾಡೆಲ್ಲಿನ ತುಂಡುಗಳನ್ನು ಜೋಡಿಸಿ ಹಿಡಿದು ಸ್ಕೂಟರ್ ಏರಿದ.

'ಈ ಬಾರಿ ಬೋರ್ವೆಲ್ ಸಕ್ಸೆಸ್ ಆದ್ರೆ ದಿನೇಶನ ಭವಿಷ್ಯಕ್ಕೆ ಒಳ್ಳೇದಾಗುತ್ತೆ' ಅಂದೆ.

'ಇಲ್ಲಾ ಸಾರ್, ಅವನಿಗೆ ಇದ್ರಾಗೆಲ್ಲ ನಂಬಿಕೆ ಇಲ್ಲ. ಅಂವ ಇಂಜಿನಿಯರ್ ಆಗ್ತಾನಂತೆ', ಎನ್ನುತ್ತ ಆಂಜನಪ್ಪ ಕಿಕ್ ಹೊಡೆದ.

ಸ್ಕೂಟರಿನ ಸಮೀಪ ಹೋಗಿ ಆಂಜನಪ್ಪನ ಭುಜದ ಮೇಲೆ ಕೈಇಟ್ಟೆ.

'ನೋಡು, ನಿನ್ನ ಈ ಹರಕೆ ಫಲ ಕೊಟ್ರೂ ಅನ್ನೊ. ಚಂದ್ರಾಲೇಔಟ್ ಸೈಟಿನಲ್ಲಿ ನೀರು ಬಂತೂ ಅಂದ್ರೆ, ನೀನು ಇದನ್ನೇ ಆ ಉಗ್ರಪ್ಪನ ದೇವಸ್ಥಾನದ ಪೂಜಾರ್ರಿಗೆ ಹೇಳ್ಬೇಯ. ಅವರು ನಿನ್ನ ಯಶಸ್ಸಿಗೆ ಪ್ರಚಾರ ಕೊಡ್ತಾರೆ. ಡ್ರಿಲ್ಲಿಂಗ್ ಯಂತ್ರದ ಮಾಡೆಲ್ ತಂದ್ರೆ ಕೊಳವೆ ಬಾವೀಲಿ ನೀರು ಖಂಡಿತ ಸಿಗತ್ತೆ ಅನ್ನೋ ಮಾತು ಟಿವಿಲಿ ದೊಡ್ಡದಾಗಿ ಸುದ್ದಿ ಆಗ್ತದೆ. ಆ ಸುದ್ದಿ ವೈರಲ್ ಆಗ್ತದೆ. ರಿಗ್ ಮಷಿನ್ನಿನ ಮಾಡೆಲ್ ತುಂಬಾ ಬೇಕಾಗ್ತವಲ್ಲ' ದಿನೇಶನ ಮಾಡೆಲ್ಲಿಗೆ ತುಂಬಾ ಡಿಮಾಂಡ್ ಬರ್ತದೆ. ಕ್ರಮೇಣ ಅವನು ಅದರದ್ದೇ ಒಂದು ಫ್ಯಾಕ್ಟರಿ ಹಾಕಬಹುದಲ್ಲ, ಮಾಡೆಲ್ ಫ್ಯಾಕ್ಟರಿ?' ಎಂದೆ.

'ಹೌದಲ್ಲ ಸಾರ್ ಹೊಳೀಲೇ ಇಲ್ಲ!' ಎನ್ನುತ್ತ ಆಂಜನಪ್ಪ ಕ್ಲಚ್ ಒತ್ತಿದ.

ಅವನ ಕಣ್ಣುಗಳು ಹೊಳೆಯುತ್ತಿದ್ದವು. ಮಗ ದಿನೇಶನ ಫ್ಯಾಕ್ಟರಿಯ ಮಾಡೆಲ್ಲನ್ನೂ ದೇವರ ಎದುರಿಗೆ ಇಡಬೇಕೆಂಬ ಕನಸು ಆ ಕಣ್ಣುಗಳಲ್ಲಿ ಮಿನುಗುತ್ತಿದ್ದವು.

●

*ಶ್ರೀ ನಾಗೇಶ್ ಹೆಗಡೆ, ಹಿರಿಯ ಪತ್ರಕರ್ತರು ಹಾಗೂ ಜನಪ್ರಿಯ ವಿಜ್ಞಾನ ಲೇಖಕರು.*

# ಪೈ ಮಾಸ್ತರರ ಸರ್ಪ್ರೈಸ್ ಟೆಸ್ಟ್



ಗಣಿತ ತರ್ಕದ ಅಪರಾವತಾರ. ಆದರೆ ಅದರಲ್ಲಿಯೇ ಕುತರ್ಕವಿದ್ದರೆ ಅದು ವಿನೋದವಾಗಬಹುದು

● ಸಂಜಯ ಹಾವನೂರ

ಮುಂದಿನ ವಾರ ನಿಮಗೆಲ್ಲ ಗಣಿತದ ಪರೀಕ್ಷೆ ಪೈ ಮಾಸ್ತರರು ಘೋಷಿಸಿದರು. ಅವರ ವಿದ್ಯಾರ್ಥಿಗಳಿಗೆ ಅಂಥ ಖುಶಿಯೇನೂ ಆಗಲಿಲ್ಲ. ಯಾವ ದಿನ ಪರೀಕ್ಷೆ ಎಂದು ತಿಳಿದುಕೊಳ್ಳಲು ಕಾಯುತ್ತಿದ್ದರು. "ಅಷ್ಟೇ ಅಲ್ಲ. ಈ ಸಲದ್ದು ಸರ್ಪ್ರೈಸ್ ಟೆಸ್ಟ್. ವಾರದ ಯಾವ ದಿನವೂ ಆಗಬಹುದು. ಅದರ ಹಿಂದಿನ ದಿನ ನಿಮಗೆ ಪರೀಕ್ಷೆ ನಡೆಯುವ ಯಾವ ಸುಳಿವೂ ಇರುವುದಿಲ್ಲ" ಪೈ ಮಾಸ್ತರರು ಇನ್ನಷ್ಟು ಉತ್ಸಾಹದಿಂದ ವಿವರಿಸಿದರು. ಈಗ ವಿದ್ಯಾರ್ಥಿಗಳ ದುಃಖ ದುಪ್ಪಟ್ಟಾಯಿತು. ಆ ವಾರಾಂತ್ಯದಲ್ಲಿ ಭರ್ಜರಿ ಕ್ರಿಕೆಟ್ ಮ್ಯಾಚುಗಳನ್ನು ನೋಡುವ ಕಾರ್ಯಕ್ರಮಗಳಿಗೆ ಕಲ್ಲು ಬಿತ್ತಲ್ಲದೇ, ಯಾವತ್ತು ಪರೀಕ್ಷೆ ನಡೆಯುತ್ತದೋ ಎಂಬ ಚಡಪಡಿಕೆಯಲ್ಲಿ ಇಡೀ ವಾರ ಕಳೆಯಬೇಕು. ಈ ಮಾಸ್ತರರು ಯಾವಾಗಲೂ ಹೀಗೇ. ಹೆಸರೇ ಇಷ್ಟು irrational ಆಗಿರುವಾಗ ನಡವಳಿಕೆಯನ್ನು ಕೇಳುವುದೇ ಬೇಡ ಎಂದು ಶಾಪ ಹಾಕಿದರು. ಆದರೆ ಖಡಕ್ ಶಿಸ್ತಿಗೆ ಹೆಸರಾಗಿದ್ದ ಪೈ ಮಾಸ್ತರರ ಮುಂದೆ ಏನೂ ಹೇಳುವಂತಿರಲಿಲ್ಲ. ಅರೆಬರೆ ಮ್ಯಾಚು ನೋಡುತ್ತ ಗಣಿತ ಪಾಠಗಳನ್ನು ಉರು ಹಾಕಲು ಮನಸ್ಸಿಲ್ಲದ ಮನಸ್ಸಿನಿಂದ ಎಲ್ಲರೂ ತಯಾರಾದರು – ತರಲೆ ಒಬ್ಬನನ್ನು ಬಿಟ್ಟು.

ತರಲೇನಹಳ್ಳಿ ರವಿಕುಮಾರ ಅರ್ಥಾತ್ ತ.ರ. ಕುಮಾರನಿಗೆ ಯಾರೇನು ಹೇಳಿದರೂ ಅದನ್ನು ತರ್ಕದ ಒರೆಗೆ ಹಚ್ಚಿ ತಿಕ್ಕಿನೋಡುವ ಚಟವಿತ್ತು. ಆ ಕಾರಣಕ್ಕೆ ತನಗೆ ತರ್ಕುಮಾರ ಎಂಬ ಅಂಕಿತವನ್ನು ತಾನೇ ಇಟ್ಟುಕೊಂಡಿದ್ದ. ಮತ್ತು ಅದೇ ಕಾರಣಕ್ಕೆ ಉಳಿದವರು ಅವನನ್ನು ಕೇವಲ ತರಲೆ ಎಂದು ಕರೆಯುತ್ತಿದ್ದರು. ಈಗ ಪೈ ಮಾಸ್ತರರ ಹೇಳಿಕೆಯನ್ನು ವಿಶ್ಲೇಷಣೆ ಮಾಡಿ, ಮುಂದಿನ ವಾರ ಪರೀಕ್ಷೆ ನಡೆಯುವುದು ಸಾಧ್ಯವೇ ಇಲ್ಲ ಎಂಬ ತರ್ಕಬದ್ಧ ತೀರ್ಮಾನಕ್ಕೆ ಬಂದಿದ್ದ. ಯಾವ ದಿನ ಪರೀಕ್ಷೆ ನಡೆಯಬಹುದು? ಶುಕ್ರವಾರವಂತೂ ಸಾಧ್ಯವಿಲ್ಲ. ಏಕೆಂದರೆ ಗುರುವಾರದ ತನಕವೂ ಪರೀಕ್ಷೆ ಆಗದಿದ್ದರೆ ಅದು ಮಾರನೇ ದಿನವೇ ಎಂದು ಎಲ್ಲರಿಗೂ ಖಚಿತ ಗೊತ್ತಾಗುತ್ತದೆ. ಆವಾಗ ಅದು ಅನಿರೀಕ್ಷಿತವಲ್ಲ. ಇದೇ ತರ್ಕ ಗುರುವಾರಕ್ಕೂ ಅನ್ವಯಿಸುತ್ತದೆ. ಬುಧವಾರದ ತನಕ ಪರೀಕ್ಷೆ ನಡೆದಿಲ್ಲವಾದರೆ, ಅದು ಗುರುವಾರ ಅಥವಾ ಶುಕ್ರವಾರ ಮಾತ್ರ ನಡೆಯಬಹುದು. ಆದರೆ ಶುಕ್ರವಾರ ಪರೀಕ್ಷೆ ಸಾಧ್ಯವಿಲ್ಲ ಎಂದು ಈಗಾಗಲೇ ಸಿದ್ಧವಾಗಿದೆ. ಅಂದ ಮೇಲೆ ಅದು ಗುರುವಾರವೇ ಜರುಗಬೇಕು. ಆದರೆ ಗುರುವಾರ ಪರೀಕ್ಷೆ ಖಂಡಿತ ಎಂದು ಹಿಂದಿನ ದಿನ ನಿರ್ಣಯಿಸಬಹುದಾದರೆ ಅದೂ ಅನಿರೀಕ್ಷಿತವಲ್ಲ, ಆದ್ದರಿಂದ ಗುರುವಾರದಂದೂ ಪರೀಕ್ಷೆಯ ಅಂಜಿಕೆಯಿಲ್ಲ. ತರ್ಕವನ್ನು ಹೀಗೆ ಹಿಂದುವರೆಸುತ್ತ ಹೋದರೆ ಸೋಮವಾರದ ತನಕವೂ ಅದನ್ನು ಕೊಡಲು ಬರುವುದಿಲ್ಲ ಎಂದಾಗುತ್ತದೆ. ವಾರದ ಯಾವುದೇ ದಿನ ಪೈ ಮಾಸ್ತರರು ಪರೀಕ್ಷೆ ತೆಗೆದುಕೊಳ್ಳಲು ಬಂದರೂ ಅವರಿಗೆ ಈ ವಿರೋಧಾಭಾಸವನ್ನು ವಿವರಿಸಿದರೆ ಸಾಕು. ತಾವು ಕಲಿಸುವ ಗಣಿತದಷ್ಟೇ ಕರಾರುವಾಕ್ಕಾಗಿ ನಡೆದುಕೊಳ್ಳುವವರು ಪರೀಕ್ಷೆಯನ್ನು ರದ್ದು ಮಾಡುತ್ತಾರೆ. ತರ್ಕುಮಾರ ವಾರಾಂತ್ಯವನ್ನು ಹಾಯಾಗಿ ಉಂಡು ಕ್ರಿಕೆಟ್ ನೋಡುತ್ತ ಕಳೆದ.

ಮುಂದಿನ ಮಂಗಳವಾರ ಪೈ ಮಾಸ್ತರರು ಪರೀಕ್ಷೆಯ ಪೇಪರುಗಳನ್ನು ಕೊಡುತ್ತಿದ್ದಂತೆ ತರ್ಕುಮಾರ ಎದ್ದು ನಿಂತು ಆಕ್ಷೇಪ ಎತ್ತಿದ. ವಾರದ ಯಾವ ದಿನವೂ ಪರೀಕ್ಷೆ ನಡೆಸುವುದು ಅವರೇ ಹಾಕಿಕೊಂಡ ನಿಯಮಗಳ ಉಲ್ಲಂಘನೆಯಾಗುತ್ತದೆ ಎಂದು ತನ್ನ ವಾದವನ್ನು ಮಂಡಿಸಿದ. ನಿನ್ನ ತರ್ಕ ಸರಿಯಾದದ್ದು ಎಂದು ನಿನಗೆ ಭರವಸೆ ಇದೆಯೆ? ಪೈಗಳು ಕೇಳಿದರು

"ಖಂಡಿತ ಸರ್. ವಾರದ ಯಾವ ದಿನವೂ ಸರ್ಪ್ರೈಸ್ ಟೆಸ್ಟು ಸಾಧ್ಯವೇ ಇಲ್ಲ"

"ಅಂಥ ಭರವಸೆಯಲ್ಲಿ ನೀನಿರುವಾಗ ಇವತ್ತಿನದು ಸರ್ಪ್ರೈಸ್ ಟೆಸ್ಟ್ ಆಯಿತಲ್ಲ! ಮತ್ತೇಕೆ ಆಕ್ಷೇಪ?" ತಬ್ಬಿಬ್ಬಾದ ತರ್ಕುಮಾರ! ಇನ್ನಷ್ಟು ಮುಂದುವರೆದು ಪೈಗಳು ಹೇಳಿದರು "ಇವತ್ತು ಮಾತ್ರವಲ್ಲ ನಾನು ಪರೀಕ್ಷೆಯನ್ನು ಶುಕ್ರವಾರವೂ ಕೊಡಬಹುದಿತ್ತು. ಏಕೆಂದರೆ ಅವತ್ತೂ ನೀನು, ಇಂದು ಪರೀಕ್ಷೆ ನಡೆಯವುದು ಸಾಧ್ಯವೇ ಇಲ್ಲ ಎಂಬ ನಿರೀಕ್ಷೆಯಲ್ಲಿ ಕ್ಲಾಸಿಗೆ ಬರುತ್ತಿದ್ದಿ ಅಲ್ಲವೇ?" ತರ್ಕುಮಾರ ತಲೆ ತುರಿಸಿಕೊಂಡ. ಎಷ್ಟು ತಿರುವಿ ಹಾಕಿದರೂ ತನ್ನ ತರ್ಕ ಎಲ್ಲಿ ತಪ್ಪಿತು ಎಂದು ತಿಳಿಯದಾಯಿತು.





## ಸೋಡಿಯಮ್ ಢಮ್ ಎಂದಾಗ!

ನಾನಾಗ ವಿಜ್ಞಾನ ಪದವಿ ಓದುತ್ತಿದ್ದೆ. ಮೊದಲನೆಯ ವರ್ಷವದು. ರಸಾಯನಶಾಸ್ತ್ರದ ಪ್ರಯೋಗಶಾಲೆಯಲ್ಲಿ ಇದ್ದ ದಿನ. ಅವತ್ತು ಮಾಡಬೇಕಾದ ಪ್ರಯೋಗ ಮುಗಿದಿತ್ತು. ಇನ್ನೇನು ಮನೆಗೆ ಹೋಗುವ ತಯಾರಿಯಲ್ಲಿದ್ದೆವು. ನನ್ನ ಜೊತೆಗೆ ಇದ್ದ ಸ್ನೇಹಿತನ ಮಿದುಳಲ್ಲಿ ವಿಜ್ಞಾನಿ ಜಾಗೃತಿಯಾದ. ಸಂಶೋಧನೆಯ ಸ್ವರೂಪ ನಮ್ಮೆದುರಿಗೆ ಅನಾವರಣವಾಯಿತು. ಎಲ್ಲರೂ ಅವನ ಸುತ್ತ ನೆರೆದೆವು 'ನೋಡಿ, ಸೋಡಿಯಮ್ ಚೂರನ್ನು ನೀರಲ್ಲಿ ಓಡಾಡುತ್ತಾ ನರ್ತನಗೈಯುತ್ತದೆ. ಆದರೆ ಸೋಡಿಯಮ್ ದ ಮೇಲೆ ನೀರು ಸುರುವಿದರೆ ಎಲ್ಲಿ ಹೋಗುತ್ತದೆ?' ಹಾವಭಾವದೊಂದಿಗೆ ಹೇಳಿದ್ದ. ಎಲ್ಲರಲ್ಲೂ ಕುತೂಹಲದ ಮನ ಜಿಗಿಯತೊಡಗಿ–ತು. ಅದುಮಿಡಲಾರದೇ ಎಲ್ಲರೂ 'ಮಾಡೇ ಬಿಡೋಣ' ಎಂದರು. ನಮ್ಮನ್ನು ಹತೋಟಿಯಲ್ಲಿಡಬೇಕಿದ್ದ ಉಪನ್ಯಾಸಕರು ಪ್ರಯೋಗಶಾಲೆಯ ಹೊರಗಡೆ ಮಾತಿನಲ್ಲಿ ತೊಡಗಿದ್ದರು. ಇಂತಹ ಸುವರ್ಣ ಅವಕಾಶ ಬಿಡಲಾದೀತೆ?. ಕಪಾಟಿನಲ್ಲಿರಿಸಿದ್ದ ಸೋಡಿಯಮ್ ಬಾಟಲಿಯಿಂದ ದೊಡ್ಡ ಕರಣಿಯಷ್ಟು ಸೋಡಿಯಮ್ ಹೊರಬಂದಿತು. ಉಪನ್ಯಾಸಕರು ಬಂದರೆ ಎಚ್ಚರಿಸುವ ಪಡೆ ಸಿದ್ಧವಿತ್ತು. ಸೋಡಿಯಮ್ ಅನ್ನು ಟೇಬಲ್ ಮೇಲೆ ಇರಿಸಲಾಯಿತು. ಪಾಪ ಕಾಲು ಕಟ್ಟಿದ ಇಲಿಯನ್ನು ಬೆಕ್ಕಿನ ಮುಂದೆ ಇರಿಸಿದಂತಿತ್ತು. ಪ್ರಯೋಗ ಮಾಡೋಣ ಎಂದು ಹೇಳಿದ ಸ್ನೇಹಿತ ಬೀಕರ್ ದಲ್ಲಿ ನೀರು ತಂದ. ಎಲ್ಲರ ಕಣ್ಣುಗಳು ಸೋಡಿಯಮ್ ಮೇಲೆ ನೆಟ್ಟಿದೆ..ಎಲ್ಲಿ ಹೋಗುತ್ತದೆ ಸೋಡಿಯಮ್ ? ನೋಡೇ ಬಿಡೋಣ !!. ನೀರು ಸುರುವಿದ್ದೇ ತಡ..ಸೋಡಿಯಮ್ ಢಮ್ ಅಂತ ಸಿಡಿಯಿತು. ಉಪನ್ಯಾಸಕರು ಏನಾಯಿತು?" ಎಂದು ಓಡಿ ಒಳಬಂದರು. ಎಲ್ಲರ ಮುಖಗಳೂ ಇಂಗು ತಿಂದ ಮಂಗನಂತಾಗಿತ್ತು. ಮುಂದಿನ ವಿವರಣೆ ಇಲ್ಲಿ ಅಪ್ರಸ್ತುತ..

– ನಾರಾಯಣ ಬಾಬಾನಗರ

ಈ ರೀತಿಯ ವಿರೋಧಾಭಾಸಗಳು ಸೃಷ್ಟಿಸುವ ಪೇಚು(paradox)ಗಳಿಗೆ ಗಣಿತ ಮತ್ತು ತರ್ಕಶಾಸ್ತ್ರದಲ್ಲಿ ತಮ್ಮದೇ ಆದ ಸ್ಥಾನವಿದೆ. ಅವುಗಳ ಉದ್ದೇಶ ಮನೋರಂಜನೆ, ಚಮತ್ಕಾರ ಅಥವಾ ಒಣ ಬುದ್ಧಿವಂತಿಕೆಯ ಪ್ರದರ್ಶನವಲ್ಲ. ಪರಸ್ಪರ ವಿರುದ್ಧವಾದ ಹೇಳಿಕೆಗಳು ಒಟ್ಟಿಗೆ ಎದುರಾದಾಗ ವಿರೋಧಾಭಾಸ ಉಂಟಾಗುತ್ತದೆ. ಆದರೆ ಎರಡೂ ಒಟ್ಟಿಗೆ ಇರಲು ವಿಜ್ಞಾನ ಮತ್ತು ಗಣಿತದಂಥ ಶಿಸ್ತುಗಳಲ್ಲಿ ಅನುಮತಿ ಇಲ್ಲ. ಅವುಗಳಲ್ಲಿ ಒಂದು ಮಾತ್ರ ಸತ್ಯವಾಗಿರಲು ಸಾಧ್ಯ. ಅದು ಯಾವುದೆಂದು ಸಿದ್ಧ ಮಾಡಿ, ಅದಕ್ಕೆ ವಿರುದ್ಧವಾದ ಹೇಳಿಕೆ ಯಾವ ತಪ್ಪು ಗ್ರಹಿಕೆ ಅಥವಾ ವಾದಸರಣಿಯಿಂದ ಬಂತು ಎಂದು ಗುರುತಿಸಿದಾಗಲೇ ಜ್ಞಾನ ಬೆಳೆಯುತ್ತದೆ.

ಅನಿರೀಕ್ಷಿತವನ್ನು ನಿರೀಕ್ಷಿಸುವಂತೆ ಮಾಡುವುದೇ ಇಲ್ಲಿರುವ ವಿರೋಧಾಭಾಸ. ಇದರ ಹಲವು ಆವೃತ್ತಿಗಳಿದ್ದರೂ, ಅತ್ಯಂತ ಜನಪ್ರಿಯವಾಗಿರುವುದು 1963ರಲ್ಲಿ ಮಾರ್ಟಿನ್ ಗಾರ್ಡನರ್ ಎಂಬ ಪ್ರಸಿದ್ಧ ಲೇಖಕ ಬರೆದ "ಅನಿರೀಕ್ಷಿತ ನೇಣು" (Unexpected Hanging) ಎಂಬ ನಿರೂಪಣೆ. ಅವನ ಕಥೆಯಲ್ಲಿ ಮರಣ ದಂಡನೆಗೆ ಗುರಿಯಾದ ಅಪರಾಧಿಗೆ ನ್ಯಾಯಾಧೀಶರು ಇದೇ ರೀತಿ "ಮುಂದಿನ ತಿಂಗಳು ನಿನ್ನನ್ನು ಗಲ್ಲಿಗೆ ಏರಿಸಲಾಗುತ್ತದೆ, ಆದರೆ ಯಾವ ದಿನ ಎನ್ನುವುದು ನಿನಗೆ ಗೊತ್ತಾಗುವುದಿಲ್ಲ" ಎಂದು ಶಿಕ್ಷೆ ವಿಧಿಸುತ್ತಾರೆ. ಅವರ ಆದೇಶವನ್ನು ಅಕ್ಷರಶಃ ಪಾಲಿಸಿದರೆ ನನ್ನನ್ನು ಯಾವ ದಿನವೂ ಗಲ್ಲಿಗೆ ಹಾಕಲು ಸಾಧ್ಯವಿಲ್ಲ ಎಂದು ವಾದಿಸಿದ ಅಪರಾಧಿ ಬಿಡುಗಡೆಯಾಗುತ್ತಾನೆ. ಬೇರೆ ಬೇರೆ ಸನ್ನಿವೇಶಗಳನ್ನು ಸೃಷ್ಟಿಸಿ ಸಮಸ್ಯೆಯನ್ನು ನಿರೂಪಿಸುವುದು ಸುಲಭ. ಕಷ್ಟ ಇರುವುದು ಅದರ ಕಗ್ಗಂಟನ್ನು ಬಿಡಿಸುವುದರಲ್ಲಿ. ವಿಷಯದ ಕುರಿತು ಗಣಿತ, ತರ್ಕಶಾಸ್ತ್ರ ಮತ್ತು ತತ್ತ್ವಜ್ಞಾನದಲ್ಲಿ ಪಳಗಿದವರಿಂದ ಇಲ್ಲಿಯ ವರೆಗೆ ನೂರಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳು ಪ್ರಕಟವಾಗಿವೆ! ವಿವಿಧ ದೃಷ್ಟಿಕೋನಗಳಿಂದ ಅಧ್ಯಯನ ಮಾಡಿದ್ದಾರೆ, ಕ್ವಾಂಟಂ ಸಿದ್ಧಾಂತದಿಂದ ಗೊಡೆಲ್ಲನ ಪ್ರಮೇಯಗಳೊಂದಿಗೆ ತಳುಕು ಹಾಕಿದವರಿದ್ದಾರೆ. ಆದರೂ ಎಲ್ಲರಿಗೂ ಒಪ್ಪಿಗೆಯಾಗುವಂಥ ವಿವರಣೆ ಇನ್ನೂ ಬಂದಿಲ್ಲವೆಂದೇ ಹೇಳುತ್ತಾರೆ. ಇಲ್ಲಿ ಮುಖ್ಯ ಸಮಸ್ಯೆ ಅಂದರೆ "ಅನಿರೀಕ್ಷಿತ" ಎಂಬ ಶಬ್ದ. ಗಣಿತದ ಕರಾರುವಾಕ್ ಭಾಷೆಯಲ್ಲಿ ಅದನ್ನು ಹೇಗೆ ಹೇಳಬೇಕು? ಬಹಳಷ್ಟು ಜಿಜ್ಞಾಸೆ ಮಾಡಿ ಶಾಸ್ತ್ರಜ್ಞರು ಸಮಸ್ಯೆಯನ್ನು ಹೀಗೆ ಮಂಡಿಸುತ್ತಾರೆ.

**1) ಶುಕ್ರವಾರ ಅಥವಾ ಅದಕ್ಕೂ ಮೊದಲು ಪರೀಕ್ಷೆ ಜರುಗುತ್ತದೆ**

**2) ಪರೀಕ್ಷೆ ನಡೆಯುವ ಹಿಂದಿನ ದಿನ, ಅದು ಖಂಡಿತ ನಡೆಯುತ್ತದೆ ಎಂದು ತರ್ಕಶುದ್ಧವಾಗಿ ಸಿದ್ಧ ಮಾಡುವುದು ಅಸಾಧ್ಯ.**

ಗಮನಿಸಬೇಕಾದ ವಿಷಯವೆಂದರೆ ಪೈ ಮಾಸ್ತರರು ತಮ್ಮ ಮಾತನ್ನು ಪಾಲಿಸುತ್ತಾರೆಯೋ ಇಲ್ಲವೋ ಎನ್ನುವುದು ಇಲ್ಲಿ ಅಪ್ರಸ್ತುತ. ಮೇಲೆ ಹೇಳಿದ ಎರಡು ವಾಕ್ಯಗಳನ್ನು ಪೂರ್ವಪಕ್ಷವಾಗಿ ಇಟ್ಟುಕೊಂಡ ತರ್ಕುಮಾರ ಯಾವ ತೀರ್ಮಾನಗಳಿಗೆ ಬರುತ್ತಾನೆ ಮತ್ತು ಆ ತೀರ್ಮಾನಗಳು ವಿರೋಧಾಭಾಸಗಳಿಂದ ಮುಕ್ತವಾಗಿರಲು ಸಾಧ್ಯವೇ ಎನ್ನುವುದೇ ನಿಜವಾದ ಸಮಸ್ಯೆ, ಮಾಸ್ತರರ ವರ್ತನೆಯಲ್ಲ. ಅವನಂತೆಯೇ ನಾವೂ ಗುರುವಾರದ ತನಕ ಪರೀಕ್ಷೆ ಆಗಿಲ್ಲವೆಂದು ತಿಳಿದು ವಿಶ್ಲೇಷಣೆಯನ್ನು ಆರಂಭಿಸೋಣ. ಮುಂದೆ ಎರಡು ಸಾಧ್ಯತೆಗಳಿವೆ

**ಅ) ಶುಕ್ರವಾರ ಪರೀಕ್ಷೆ ನಡೆಯುವುದಿಲ್ಲ**

**ಬ) ಶುಕ್ರವಾರ ಪರೀಕ್ಷೆ ನಡೆಯುತ್ತದೆ.**

ಇವುಗಳಲ್ಲಿ ಯಾವ ತೀರ್ಮಾನ ನಿರ್ದುಷ್ಟವಾದದ್ದು? ಎರಡೂ ಅಲ್ಲ! ಅ) ಮತ್ತು 1) ಪರಸ್ಪರ ವಿರುದ್ಧ ಹೇಳಿಕೆಗಳಾದರೆ ಬ) ಮತ್ತು 2) ಸಹ ಒಂದಕ್ಕೊಂದು ವಿರುದ್ಧವೇ ಆಗಿವೆ. ವಿರೋಧಾಭಾಸದ ಮೂಲ ಈಗ ಸ್ಪಷ್ಟವಾಗುತ್ತದೆ. ಗ್ರಹಿತವಾಗಿಟ್ಟುಕೊಂಡ ಎರಡು ಪೂರ್ವಪಕ್ಷಗಳಲ್ಲಿಯೇ ಸಾಮರಸ್ಯವಿಲ್ಲ. ಆದ್ದರಿಂದ ಅವೆರಡಕ್ಕೂ ಸಂಗತವೆನಿಸುವ ಯಾವ ನಿರ್ಣಯಕ್ಕೂ ಬರಲು ಸಾಧ್ಯವಿಲ್ಲ. ಮೊದಲೇ ಹೇಳಿದಂತೆ ಇದು ಸಮಸ್ಯೆಯ ಸ್ಥೂಲವಾದ ಪರಿಹಾರವಷ್ಟೇ. ಸೂಕ್ಷ್ಮ ಆಕ್ಷೇಪಗಳು, ಭಿನ್ನಾಭಿಪ್ರಾಯಗಳೂ ಸಾಕಷ್ಟಿವೆ.

ಅಂದ ಹಾಗೆ ಅದೇ ಶುಕ್ರವಾರ ಪೈ ಮಾಸ್ತರರು ತರ್ಕುಮಾರನಿಗಾಗಿಯೇ ಇನ್ನೊಮ್ಮೆ ಪರೀಕ್ಷೆಯನ್ನಿಟ್ಟು ಅದರಲ್ಲಿ ಅವನು ಚೆನ್ನಾಗಿ ಮಾಡಿದ್ದಾನೆಂದು ತಿಳಿದು ಬಂದಿದೆ.



*ಸಂಜಯ ಹಾವನೂರರು,*
*ವಿಜ್ಞಾನಿಗಳು ಹಾಗೂ ವಿಜ್ಞಾನ ಲೇಖಕರು, ಕಥೆಗಾರರು.*

**ಕನ್ನಡದಲ್ಲಿ ಅಪರೂಪವೆನ್ನಿಸಿದ ವಿಜ್ಞಾನ ಮತ್ತು ಇಂಜಿನಿಯರಿಂಗ್ ಕವಿತೆಗಳ ಬಗ್ಗೆ ತಿಳಿಸಿಕೊಡುತ್ತಿದ್ದಾರೆ**

**ಶಶಿಧರ ಘೋಂಗ್ರೆ**




# ವಿಜ್ಞಾನ ಮತ್ತು ಇಂಜಿನಿಯರಿಂಗ್ ಗೀತೆಗಳು

ಕನ್ನಡದಲ್ಲಿ ವಿಜ್ಞಾನ ಮತ್ತು ಎಂಜಿನಿಯರಿಂಗ್ ಕುರಿತ ಪದ್ಯಗಳನ್ನು ಬರೆದವರಲ್ಲಿ ಡಾ. ಚಿದಾನಂದ ಗೌಡರದು ಮುಖ್ಯವಾದ ಹೆಸರು. 1980 ರ ದಶಕದಲ್ಲಿ ಅನೇಕ ಕವನ ಸಂಕಲನಗಳನ್ನು ಪ್ರಕಟಿಸಿದ ಶ್ರೀಯುತರು, ನವೋದಯ ಶೈಲಿಯನ್ನು ತಮ್ಮದಾಗಿಸಿಕೊಂಡಿಸಿಕೊಂಡಿದ್ದರು. ವಿಜ್ಞಾನ ವಚನಗಳು 1984; ಪತ್ತೇದಾರಿ ಪದ್ಯಗಳು 1989; ಎಂಜಿನಿಯರಿಂಗ್ ಗೀತೆಗಳು 1980; ಎಂಬ ಸಂಕಲನಗಳನ್ನು ಒಳಗಂಡು ಆರು ಕನ್ನಡ ಕವನ ಸಂಕಲನಗಳಲ್ಲದೆ ಇಂಜಿನಿಯರಿಂಗ್ ಲಿರಿಕ್ಸ್ (`Engineering Lyrics') ಎಂಬ ಇಂಗ್ಲಿಷ್ ಕವಿತೆಗಳ ಸಂಗ್ರಹವನ್ನೂ ಪ್ರಕಟಿಸಿದ್ದಾರೆ. ಪ್ರತಿಯೊಂದು ಸಂಕಲನದಲ್ಲಿಯೂ 50 ರಷ್ಟು ಕವಿತೆಗಳಿದ್ದು, ವಿಜ್ಞಾನ ಮತ್ತು ಎಂಜಿನಿಯರಿಂಗ್ ವಿಷಯಗಳ ಅನೇಕ ಆಯಾಮಗಳನ್ನು ಕುರಿತಾಗಿವೆ.

'ಎಂಜಿನಿಯರಿಂಗ್ ಗೀತೆಗಳು' ಪುಸ್ತಕದ ಅರ್ಪಣೆ ಅವರ ದೃಷ್ಟಿಕೋನಕ್ಕೆ ಕನ್ನಡಿ ಹಿಡಿದ ಹಾಗಿದೆ.

**ಶಿವರಾಮ ಕೃಷ್ಣರನು ಏಸು ಮಹಮೂದರನು**
**ಬುದ್ಧರವತಾರಗಳ ಶಕ್ತಿ ನಾನರಿಯೆ**
**ವಿದ್ಯುದೇವತೆ ನಿನ್ನ ಶಕ್ತಿಯನು ಕಂಡುಂಡು**
**ಕಲಿಯುಗದ ಕಲ್ಕಿ ನೀನೆಂದು ವಂದಿಸುವೆನು**

ವೃತ್ತಿಯಲ್ಲಿ ಇಲೆಕ್ಟ್ರಿಕಲ್ ಎಂಜಿನಿಯರಾಗಿದ್ದು, ಮೈಸೂರಿನ ಶ್ರೀ ಜಯಚಾಮರಾಜೇಂದ್ರ ಇಂಜಿನಿಯರಿಂಗ್ ಕಾಲೇಜಿನಲ್ಲಿ ಪ್ರೊಫೆಸರ್ ಆಗಿದ್ದ ಚಿದಾನಂದರು ಸಹಜವಾಗಿಯೇ ವಿದ್ಯುಚ್ಛಕ್ತಿ ಯ ಸುತ್ತಮುತ್ತ ಅನೇಕ ಕವಿತೆಗಳನ್ನು ಬರೆದಿದ್ದಾರೆ. ಇದಲ್ಲದೆ, ಡಾರ್ವಿನ್ನನ ವಿಕಾಸವಾದ, ಪರಮಾಣುಗಳ ರಚನೆ ಇಂಥ ಮೂಲ ವಿಜ್ಞಾನದ ಪರಿಕಲ್ಪನೆಗಳ ಬಗ್ಗೆ, ಸಿವಿಲ್ ಮತ್ತು ಮೆಕ್ಯಾನಿಕಲ್ ಎಂಜಿನಿಯರಿಂಗ್ ನಿಂದ ಆಯ್ದ ವಸ್ತುಗಳ ಬಗ್ಗೆಯೂ ಕವಿತೆಗಳನ್ನು ರಚಿಸಿದ್ದಾರೆ. ಅವರ ಅನೇಕ ಕವಿತೆಗಳಲ್ಲಿ, ವಿಜ್ಞಾನದ ಸಿದ್ಧಾಂತವನ್ನು ಬದುಕಿನ ಸಿದ್ಧಾಂತದ ಜೊತೆಗೆ ಸಮೀಕರಿಸುವ ಪ್ರಯತ್ನವನ್ನು ನೋಡಬಹುದು.

ವೃತ್ತಗಳು ಎನ್ನುವ ಪದ್ಯದಲ್ಲಿ

**ನಾವೆಲ್ಲ ವೃತ್ತಗಳು**
**'ನಾನ್' ಎನುವ ವೃತ್ತ ಕೇಂದ್ರದ ಸುತ್ತ**
**'ನನ್ನ' ದೆನ್ನುವ ಪರಿಧಿಯಾವರಿತ**
**ನಾವೆಲ್ಲ ವೃತ್ತಗಳು**

ಈ ಉದಾಹರಣೆ, ವೃತ್ತ ಮತ್ತು ಪರಿಧಿ ಎನ್ನುವ ಕಲ್ಪನೆಗಳ ಸುತ್ತ ಹೆಣೆದಿದ್ದರೆ, ಈ ಕೆಳಗಿನ ಪದ್ಯ 'ಇನ್ಸುಲೇಟರ್' ಎನ್ನುವ ತತ್ವವನ್ನು ಕೇಂದ್ರವಾಗಿಸಿದೆ.

**ವಿದ್ಯುತ್ ವ್ಯವಸ್ಥೆಯಲಿ**
**ಪ್ರವಾಹನೊಯ್ವ ತಂತಿಯೊಂದಿರಬೇಕು**
**ಅದರ ಜೊತೆಯಲಿರಲು**
**ಪ್ರವಾಹವಂ ತಡೆವ ಇನ್ಸುಲೇಟರು ಬೇಕು**

**ಜಗದ ವ್ಯವಹಾರದಲಿ**
**ಭಾವಪ್ರವಾಹವನೊಯ್ವ ಲಿಪ್ತತೆಯು ಇರಬೇಕು**
**ಅದರ ಜತೆಯಲಿ**
**ಭಾವಪ್ರವಾಹವಂ ತಡೆವ ನಿರ್ಲಿಪ್ತತೆಯು ಬೇಕು**

ಇನ್ಸುಲೇಟರಿನ ಸ್ವಭಾವಕ್ಕೂ, ನಿರ್ಲಿಪ್ತತೆಯನ್ನು ತಂದುಕೊಡುವ ಮನಃಸ್ಥಿತಿಗೂ ತಾಳೆ ಹಾಕುವ ಸರಳ ಪದ್ಯ ಇದು.

ಚಿದಾನಂದಗೌಡರ ಬಹುತೇಕ ಎಲ್ಲ ಕವಿತೆಗಳೂ ಸರಳವಾಗಿ ಓದಿಸಿಕೊಂಡು ಹೋಗುತ್ತವೆ ಮತ್ತು ಸಂಕೀರ್ಣ ಭಾವವನ್ನು ಸಾಂದ್ರವಾಗಿಸಬೇಕೆಂಬ ತುರ್ತು ಕಾಣುವುದಿಲ್ಲ. ಆಗಿನ ಕಾಲಮಾನದಲ್ಲಿ ಬೀಸುತ್ತಿದ್ದ ನವ್ಯದ ಗಾಳಿಯೂ ಇಲ್ಲಿ ಹೆಚ್ಚು ಸೋಕಿದಂತಿಲ್ಲ. ಅವರ 'ನವ್ಯೋದಯ ಸಾಹಿತ್ಯ' ಎಂಬ ಪದ್ಯ ನವ್ಯ ಸಾಹಿತ್ಯವನ್ನು ಸ್ವಲ್ಪ ಅಣಕಿಸುವ

ಹಾಗೆಯೇ ಕಾಣುತ್ತದೆ.

**ಮಣ್ಣ ವಾಸನೆ ಮೂಸುವಾಸೆಯ ನವ್ಯದೃಷ್ಟಿ**
**ಅಲ್ಲೆ ನಿಲ್ಲದೆ**
**ಮಣ್ಣಿನಾಳಕ್ಕಿಳಿದು ಮುಂಬರಿದು**
**ಮೊಹೆಂಜದಾರೋ ಕಂಡು ಹಳೆ ಸುಸಂಸ್ಕೃತಿಯುಂಡು**
**ಪಳೆಯುಳಿಕೆ ನೋಡಿ ಡಾರ್ವಿನ್? ಬಂಡಾಯ ಹೂಡಿ**
**ಸ್ವರ್ಣ ನಿಕ್ಷೇಪ ದೊರೆತಾಗ ಗನಿ ವಿಜ್ಞಾನಿಯಾಗಿ**

ಭವ್ಯ ಗಗನದಲಿ ನವ್ಯೋದಯ ದರ್ಶನವಯ್ಯ ಎಂದು ಹೇಳುತ್ತಾರೆ.

ಎಂಜಿನಿಯರುಗಳೆಂದರೆ ಹೊಸದನ್ನು ಸೃಷ್ಟಿಸುವವರು ಎಂಬ ಭಾವವು ಸಾಮಾನ್ಯವಷ್ಟೆ. ಹಾಗಾದರೆ ಹಳೆಯದನ್ನು ಏನು ಮಾಡಬೇಕು? ಎನ್ನುವ ಪ್ರಶ್ನೆ 'ಧರ್ಮ ಯಂತ್ರ' ಪದ್ಯದ ಕೇಂದ್ರದಲ್ಲಿದೆ.

**ನೀನೋರ್ವ ಎಂಜಿನಿಯರಾಗಿರುವೆ**
**ಹಳೆಯದಕೆ ನೀನೇನು ಸಲಹೆ ಕೊಡುವೆ?**

**ಹಳೆಮನೆಯ ಕಡೆಗಿಷ್ಟು ದೃಷ್ಟಿ ಹಾಕು**
**ಅಲ್ಲಿ**
**ಭದ್ರ ಭಾಗವನೆಲ್ಲ ಉಳಿಸಿಕೊಳಬೇಕು**
**ಛಿದ್ರವಾಗಿರುವುದನು ಉರುಳಿಸಲೇ ಬೇಕು**
**ಶಿಥಿಲವಾಗಿರುವುದನು ಭದ್ರಗೊಳಿಸಲು ಬೇಕು**
**ಹಳೆ ಬುನಾದಿಯ ಮೇಲೆ ಹೊಸತು ನಿಲಬೇಕು**

ಹೀಗೆ ಸಾಗುವ ಪದ್ಯ, ಕೊಂಡು ಬಿಸಾಡುವ ಗ್ರಾಹಕ ಪ್ರವೃತ್ತಿಯ ಬಗೆಗಿನ ವ್ಯಾಖ್ಯಾನವೋ ಎನಿಸುತ್ತದೆ. ಇತ್ತೀಚಿನ ದಿನಗಳಲ್ಲಿ, 'design to maintain/ repair' ಅಂದರೆ ಮರುಬಳಕೆ ಅಥವಾ ದುರಸ್ತಿಗೆ ಅನುಕೂಲವಾಗುತೆ ರಚಿಸಬೇಕು ಎನ್ನುವ ಹೊಸ ಸಿದ್ಧಾಂತ ಮತ್ತೆ ಪುನರ್ಜನ್ಮ ತೆಗೆದುಕೊಳ್ಳುತ್ತಿರುವ ಸಂದರ್ಭದಲ್ಲಿ ಈ ಪದ್ಯ ಮತ್ತಷ್ಟು ಪ್ರಸ್ತುತವಾಗಿದೆ.

ಚಿದಾನಂದರ ಇಂಗ್ಲಿಷ್ ಕವಿತೆಗಳ ಸಂಗ್ರಹ ಇಂಜಿನಿಯರಿಂಗ್ ಲಿರಿಕ್ಸ್ (`Engineering Lyrics') ಅನೇಕ ದೃಷ್ಟಿಗಳಿಂದ ಮಹತ್ವದ್ದು. ವಿಶ್ವಸಾಹಿತ್ಯದಲ್ಲೂ ವಿಜ್ಞಾನ ಕವಿತೆಗಳನ್ನು ನೋಡುತ್ತೇವೆಯಾದರೂ ಎಂಜಿನಿಯರಿಂಗ್ ಗೆ ಮೀಸಲಿಟ್ಟ ಕವಿತಾ ಸಂಕಲನಗಳ ಸಂಖ್ಯೆ ತುಂಬ ಕಡಿಮೆ. ಈ ಪುಸ್ತಕದ ಅರ್ಪಣೆಯೇ, ವಿಜ್ಞಾನ ಮತ್ತು ಕಲೆ ಎನ್ನುವುದು, ಒಂದೇ ಗುರಿಯನ್ನು ಬೇರೆ ಬೇರೆ ದಾರಿಗಳಿರಬಹುದೇ ಎಂಬ ಸಿದ್ಧಾಂತವನ್ನು ಮಂಡಿಸುವಂತೆ ತೋರುತ್ತದೆ.

Dedicated To
All Engineers

Whose engineering designs
Are but poetic charms
In a material form realised;

And

All poets
Whose poetic works
Are but engineering feats






**ವಿಜ್ಞಾನ ವಚನಗಳು 1984; ಪತ್ತೇದಾರಿ ಪದ್ಯಗಳು 1989; ಎಂಜಿನಿಯರಿಂಗ್ ಗೀತೆಗಳು 1980; ಎಂಬ ಸಂಕಲನಗಳನ್ನು ಒಳಗಂಡು ಆರು ಕನ್ನಡ ಕವನ ಸಂಕಲನಗಳಲ್ಲದೆ ಇಂಜಿನಿಯರಿಂಗ್ ಲಿರಿಕ್ಸ್ (`Engineering Lyrics') ಎಂಬ ಇಂಗ್ಲಿಷ್ ಕವಿತೆಗಳ ಸಂಗ್ರಹವನ್ನೂ ಪ್ರಕಟಿಸಿದ್ದಾರೆ. ಪ್ರತಿಯೊಂದು ಸಂಕಲನದಲ್ಲಿಯೂ 50 ರಷ್ಟು ಕವಿತೆಗಳಿದ್ದು, ವಿಜ್ಞಾನ ಮತ್ತು ಎಂಜಿನಿಯರಿಂಗ್ ವಿಷಯಗಳ ಅನೇಕ ಆಯಾಮಗಳನ್ನು ಕುರಿತಾಗಿವೆ.**

In an ethereal realm theorized.

ಈ ಸಂಕಲದಲ್ಲಿರುವ No Admission for Engineers ಎಂಜಿನಿಯರನೊಬ್ಬ ತೀರಿ–ಕೊಂಡು ನರಕಕ್ಕೆ ಹೋದಾಗ ಏನಾಯಿತು ಎಂಬ ಕಲ್ಪನೆಯನ್ನು ಹಾಸ್ಯಮಯವಾಗಿ ಚಿತ್ರಿಸಿದೆ.

And he did not lead his life well
An engineer, after death, was sent to hell.
Darkness and misery he saw everywhere
``To hell with Hell !'' cried the engineer;
Eternal fires, streaming water, red hot iron
Present here and there for sinners' retribution

Seeing the streaming water and the eternal fire
The Engineer's imagination began to fire;
`Let me use this eternal stream' he thought
Turbines and generators ? he carefully built;
Taking electrification to every nook and corner
He lighted hell with generated power.
Better than heaven appeared hell
And a happy haven for those that dwell.

On one of his rounds came God for inspecting hell
Wonderstuck by the transformation he cried:
``Who the hell is responsible?''
When the engineer was finally identified
God appeared really worried
And to the guards finally he said:
``Better than heaven hell would appear
If in hell settles an engineer;
So for heaven's sake
Chances you don't take
Whatever might be the magnitude of their sin
For engineers to hell deny admission !''

*ಶಶಿಧರ ಡೋಂಗ್ರೆ, ಮಾಹಿತಿ ತಂತ್ರಜ್ಞಾನದಲ್ಲಿ ಹಿರಿಯ ಹುದ್ದೆಯಲ್ಲಿರುವ ಇಂಜಿನಿಯರಷ್ಟೆ ಅಲ್ಲ, ಕವಿತೆ, ಸಂಗೀತ, ನಾಟಕಗಳಲ್ಲಿ ಆಸಕ್ತರು. ಸ್ವತಃ ಹಲವಾರು ವಿಜ್ಞಾನ ನಾಟಕಗಳನ್ನು ಅನುವಾದಿಸಿದ್ದಾರೆ*

# ಕಂಡವರ ಮಕ್ಕಳನ್ನು ಹಿಮ ಬಾವಿಗೆ ತಳ್ಳಿ...?

ಚಿತ್ರ: ಎಕೋಲೇಕ್ ಸರೋವರ ಮತ್ತು ಮೌಂಟ್ ಎವನ್ಸ ಪರ್ವತ

● ಪಾಲಹಳ್ಳಿ ವಿಶ್ವನಾಥ್

**ಖಗೋಳ ವಿಜ್ಞಾನಿಗಳ ಕಣ್ಣಲ್ಲಿ ತಾರೆಗಳು ಮಿಂಚುತ್ತಿರುತ್ತವಂತೆ. ದೂರದ ಬೆಟ್ಟಗಳ ಮೇಲೆ, ಮನುಷ್ಯರ ರಗಳೆ ಇಲ್ಲದ, ಮಾಲಿನ್ಯವಿಲ್ಲದ, ಹುಣ್ಣಿಮೆಯ ರಾತ್ರಿಯಲ್ಲಿಯೂ ನಿಚ್ಚಳವಾಗಿ ಕಾಣುವ ತಾರೆಗಳ ಆಗಸದ ಅಡಿಯಲ್ಲಿ ಇರುವ ಸುಖ ಜೀವನ ಎನ್ನುತ್ತಾರೆ. ಇದೋ! ಪಾಲಹಳ್ಳಿ ವಿಶ್ವನಾಥರ ಕಣ್ಣುಗಳಲ್ಲಿ ಕಂಡದ್ದೇನು ಅವರೇ ಹೇಳುತ್ತಾರೆ.**

ಭೌತವಿಜ್ಞಾನದಲ್ಲಿ ಪಿ.ಎಚ್.ಡಿ ಅಧ್ಯಯನಕ್ಕೆಂದು ಅಮೆರಿಕದ ಮಿಶಿಗನ್ ವಿಶ್ವವಿದ್ಯಾಲಯದ ಆನ್ ಆರ್ಬರ್ ನಗರಕ್ಕೆ ಹೋಗಿ ವಿದ್ಯಾಭ್ಯಾಸವನ್ನು ಶುರುಮಾಡಿದೆ. ಇದಕ್ಕೆ ಮೊದಲು ಮುಂಬಯಿಯ ಟಾಟಾ ಮೂಲಭೂತ ಸಂಶೋಧನಾ ಸಂಸ್ಥೆಯಲ್ಲಿ ಸಂಶೋಧನೆಗಳನ್ನು ನಡೆಸುತ್ತಿದ್ದ ನನಗೆ ಮಿಶಿಗನಿ ನಲ್ಲೂ ತಿಂಗಳಿಗೆ ಮುನ್ನೂರು ಡಾಲರು ಸಂಬಳ ತರುವ ಸಂಶೋಧನಾ ಸಹಾಯಕನ ಕೆಲಸ ಸಿಕ್ಕಿದ್ದು ಜೀವನೋಪಾಯಕ್ಕೆ ಮತ್ತು ವಿದ್ಯಾಭ್ಯಾಸಕ್ಕೆ ಸಹಾಯವಾಯಿತು. ವಿದ್ಯಾಭ್ಯಾಸವೆಂದರೆ ಅಂದರೆ ಇನ್ನೇನಲ್ಲ. ಕ್ಲಾಸಿಗೆ ಹೋಗಿ ಪಾಠಗಳನ್ನು ಕೇಳಿಸಿಕೊಂಡು ಪರೀಕ್ಷೆಗಳಲ್ಲಿ ಒಳ್ಳೆಯ ಅಂಕಗಳನ್ನು ಗಳಿಸಲು ಪ್ರಯತ್ನಿಸುವುದು. ಸಾಮಾನ್ಯವಾಗಿ ವಿದ್ಯಾರ್ಥಿಗಳು ಒಂದು ಸೆಮೆಸ್ಟರಿಗೆ ( ~ 4 ತಿಂಗಳುಗಳು) 3–4 ಕೋರ್ಸ್ ತೆಗೆದುಕೊಳ್ಳುತ್ತಿದ್ದರು. ನನ್ನ ಉದ್ದೇಶವೂ ಅದೇ ಇತ್ತು. ನಾನು ಸೇರಿದ ಕೆಲವು ದಿನಗಳ ನಂತರ ನನ್ನ ಮಾರ್ಗದರ್ಶಿಯಿಂದ ಕರೆ ಬಂತು. 'ನಮ್ಮ ಪ್ರಯೋಗ ನಡೆಯುತ್ತಿರುವುದು ಕೊಲರಾಡೊನಲ್ಲಿ . ನೀನು ಆಗಾಗ್ಗೆ ಅಲ್ಲಿಗೆ ಹೋಗಲು ಇಷ್ಟಪಡಬಹುದು," ಎಂದರು. ನನಗೆ ಆಶ್ಚರ್ಯವಾಯಿತು. "ಕೋರ್ಸುಗಳು ನಡೆಯುತ್ತಿರುತ್ತಲ್ಲಾ" ಎಂದು ಪ್ರಶ್ನಿಸಿದಾಗ " ಸೋ .. ಅದು ನಿನ್ನ ವೈಯುಕ್ತಿಕ ವಿಷಯ. ಓದುವುದಕ್ಕೆ ಸ್ವಲ್ಪ ಹೆಚ್ಚು ಶ್ರಮ ಪಡಬೇಕಾಗಬಹುದು .ಅಷ್ಟೇ.. 'ಎಂದು ಹೇಳಿ ಹೊರಟು ಹೋದರು. ಅವರು ಯಾವಾಗಲೂ ' ಯು ಮೇ ಲೈಕ್ ಟು ಡೂ ಇಟ್" ಎಂದೇ ಹೇಳುತ್ತಿದ್ದರು. ನಾನು ಮೊದಲು ಒಂದೆರಡುಬಾರಿ ಅದನ್ನು 'ನಿನಗೆ ಇಷ್ಟವಾಗಬಹುದು' ಎಂದು ಅಪಾರ್ಥ ಮಾಡಿಕೊಂಡಿದ್ದೆ; ನನಗೆ ಅದು ಇಷ್ಟವಿಲ್ಲ ಎಂದು ಮಾಡಿರಲೂ ಇಲ್ಲ. ಆದರೆ ಅದರ ನಿಜ ಅರ್ಥ, ನನಗೆ ಇಷ್ಟವಿದೆಯೋ ಇಲ್ಲವೋ 'ಇದನ್ನು ಮಾಡಲೇಬೇಕು ' ಎಂಬುದು ಅರಿವಾಯಿತು! ಸ್ವಲ್ಪ ನಿಧಾನವಾಗಿ.

ಪರಮಾಣುಗಳಲ್ಲಿರುವ ಮೂಲಕಣಗಳಲ್ಲಿ ಒಂದು ಕಣ ಇನ್ನೊಂದನ್ನು ತಾಡಿಸಿದಾಗ ಏನಾಗುತ್ತದೆ ಎಂಬುದು ನಮ್ಮ ಗುಂಪಿನ ಸಂಶೋಧನೆಯ ಉದ್ದೇಶವಾಗಿತ್ತು. ಕಣ ಎಂದರೆ ಎಲೆಕ್ಟ್ರಾನ್, ಪ್ರೋಟಾನ್ ಇತ್ಯಾದಿ. ಹತ್ತು ವರ್ಷಗಳ ಹಿಂದೆ ನಾನು ಬರೆದಿದ್ದ ' ಕಣಕಣ ದೇವಕಣ' ಪುಸ್ತಕದ ಶೀರ್ಷಿಕೆಯನ್ನು ನೋಡಿದ ಒಬ್ಬ ಸಾಹಿತಿ ಏನೋ 'ರವಿಕೆ ಕಣವಾ?' ಎಂದು ಕೇಳಿದ್ದರು ! ತಮಾಷೆಗೆ ಇರಬೇಕು ಎಂದುಕೊಂಡಿದ್ದೇನೆ.

ಸಂಶೋಧನೆಗಳಿಗೆ ಬೇಕಾದ ಕಣಗಳಿಗೆ ಎಲ್ಲಿ ಹೋಗೋಣ? ಬಾಹ್ಯಾಕಾಶದ ವಿವಧ ಭಾಗಗಳಿಂದ ಬರುವ, ನಾವು ಕಾಸ್ಮಿಕ್‌ರೇ ಎನ್ನುವ ವಿಶ್ವಕಿರಣಗಳು ವಾತಾವರಣದಲ್ಲಿನ ಪರಮಾಣುಗಳ ಜೊತೆ ವರ್ತಿಸುವಾಗ ಹೊಸ ಕಣಗಳು ಹುಟ್ಟುತ್ತಾ ಹೋಗುತ್ತವೆ; ಹೀಗೆ ಹುಟ್ಟುವ ಹಲವಾರು ಪೀಳಿಗೆಗಳ ಕಣಗಳನ್ನು ಅವು ಕೆಳಗೆ ಇಳಿಯುವಾಗ ಬೇರೆ ವಸ್ತುಗಳು ಹೀರಿಬಿಡುತ್ತವೆ. ಆದ್ದರಿಂದ ಆದಷ್ಟೂ ಮೇಲೆ ಹೊದರೆ ಹೆಚ್ಚು ಕಣಗಳನ್ನು ಹಿಡಿಯಬಹುದು. ಹೀಗಾಗಿ ಇಂತಹ ಪ್ರಯೋಗಗಳನ್ನು




ಪರ್ವತ ಪ್ರದೇಶಗಳಲ್ಲಿ ನಡೆಸುತ್ತಾರೆ. ಭಾರತದಲ್ಲೂ ಊಟಿಯಂತಹ ಎತ್ತರದ ಸ್ಥಳದಲ್ಲಿ ಈ ಪ್ರಯೋಗಗಳು ನಡೆಯುತ್ತವೆ. ಅಮೆರಿಕದ ಪಶ್ಚಿಮದಲ್ಲಿರುವ ಕೊಲರಾಡೊ ಪ್ರಾಂತ್ಯದಲ್ಲಿ ಅನೇಕ ಪರ್ವತ ಪ್ರದೇಶಗಳಿದ್ದುದರಿಂದ, ಬಹಳ ಹಿಂದೆಯೇ ~10500 ಅಡಿಗಳು ಎತ್ತರದಲ್ಲಿದ್ದ 'ಎಕೋಲೇಕ್ ' ಎಂಬ ಸರೋವರದ ಹತ್ತಿರ ಒಂದು ಪ್ರಯೋಗಶಾಲೆಯನ್ನು ಸ್ಥಾಪಿಸಿದ್ದರು. ಭೌತವಿಜ್ಞಾನದ ಹಲವಾರು ಮುಖ್ಯ ಪ್ರಯೋಗಗಳು ಅಲ್ಲಿಯೇ ನಡೆದಿದ್ದವು. ಎಕೊ ಲೇಕ್ ಎತ್ತರ ಸುಮಾರು ಲಡಾಕಿನ ಲೇಹ್ ನಗರದಷ್ಟೇ ! ಎಕೊ ಲೇಕಿನ ಬಳಿ ಬೇಕಾದಷ್ಟು ಪೈನ್ ಮರಗಳಿದ್ದವು; ಬಹಳ ಹಸಿರು ಪ್ರದೇಶ.. ಎಕೊಲೇಕಿನಿಂದ ಇನ್ನೂ ಮೇಲೆ ಹೋದಲ್ಲಿ ಉತ್ತರ ಅಮೆರಿಕ ಖಂಡದ ಉನ್ನತ ಶಿಖರಗಳಲ್ಲಿ ಒಂದಾದ 14500 ಅಡಿ ಎತ್ತರದ ಎವನ್ಸ ಪರ್ವತ ಸಿಗುತ್ತದೆ. ಅಲ್ಲೂ ಹಿಂದೆ ಹಲವಾರು ವಿಶ್ವಕಿರಣಗಳ ಪ್ರಯೋಗಗಳು ನಡೆದಿದ್ದವು

ಎಕೋಲೇಕಿನಲ್ಲಿ ರಸ್ತೆಗೆ 5 ನಿಮಿಷ ದೂರದಲ್ಲಿ ಒಂದು ಲಾಗ್ ಕ್ಯಾಬಿನ್ (ಮರದ ತುಂಡುಗಳಿಂದ ಕಟ್ಟಿದ ಮನೆ) ಇದ್ದಿತು. ಅದರಲ್ಲೇ ಪುಟ್ಟ ಪುಟ್ಟ ಕೋಣೆಗಳಲ್ಲಿ ವಾಸ; ಅಲ್ಲೇ ವರ್ಕ್ ಶಾಪ್ ಇತ್ಯಾದಿ. ಹತ್ತು ನಿಮಿಷಗಳ ದೂರದಲ್ಲಿ ಮತ್ತೊಂದು ಕಟ್ಟಡ; ಹಿಂದೆ ಎನಾಗಿತ್ತೋ, ಈಗಂತೂ ಹೊಟೇಲು, ಅದೂ ಬೇಸಗೆಯಲ್ಲಿ ಮಾತ್ರ! ಒಟ್ಟಿನಲ್ಲಿ 20–30 ಕಿಮೀ ಚದುರ ಕಿಮೀ ವಿಸ್ತೀರ್ಣದಲ್ಲಿ ಬೇರೆ ಯಾವ ವಾಸಸ್ಥಾನವೂ ಇರಲಿಲ್ಲ. ಆದರೆ ಎಕೋಲೇಕಿಗೆ ಬರುವುದು ಹೇಗೆ?

ಕೊಲೊರಾಡೊವಿನ ದೊಡ್ಡ ಊರು 'ಮೈಲ್ ಹೈ ಸಿಟಿ' ಎಂದು ಹೆಸರು ಗಳಿಸಿದ್ದ ~5000 ಅಡಿ ಎತ್ತರದಲ್ಲಿದ್ದ ಡೆನ್ವರ್ ನಗರ. ನಮ್ಮ ವಿಶ್ವವಿದ್ಯಾನಿಲಯವಿದ್ದ ಆನ ಆರ್ಬರಿನಿಂದ ಡೆನ್ವರ್ ಸರಿಸುಮಾರು 2000 ಕಿಮೀ ದೂರವಿತ್ತು. ಮೊದಲು 65 ಕಿಮೀ ದೂರದಲ್ಲಿದ್ದ ಡೆಟ್ರಾಯಿಟ್ ವಿಮಾನ ನಿಲ್ದಾಣಕ್ಕೆ ಹೋಗಿ, ಅಲ್ಲಿಂದ ಶಿಕಾಗೋಗೆ, ಶಿಕಾಗೋದಿಂದ ಇನ್ನೊಂದು ವಿಮಾನ ಹಿಡಿಯಬೇಕಿತ್ತು. ಶಿಕಾಗೋದಿಂದ ಒಂದು ಗಂಟೆ–

**ಭಾರತದಲ್ಲೂ ಊಟಿಯಂತಹ ಎತ್ತರದ ಸ್ಥಳದಲ್ಲಿ ಈ ಪ್ರಯೋಗಗಳು ನಡೆಯುತ್ತವೆ. ಅಮೆರಿಕದ ಪಶ್ಚಿಮದಲ್ಲಿರುವ ಕೊಲರಾಡೊ ಪ್ರಾಂತ್ಯದಲ್ಲಿ ಅನೇಕ ಪರ್ವತ ಪ್ರದೇಶಗಳಿದ್ದುದರಿಂದ, ಬಹಳ ಹಿಂದೆಯೇ ~10500 ಅಡಿಗಳು ಎತ್ತರದಲ್ಲಿದ್ದ ' ಎಕೋಲೇಕ್' ಎಂಬ ಸರೋವರದ ಹತ್ತಿರ ಒಂದು ಪ್ರಯೋಗಶಾಲೆಯನ್ನು ಸ್ಥಾಪಿಸಿದ್ದರು. ಭೌತವಿಜ್ಞಾನದ ಹಲವಾರು ಮುಖ್ಯ ಪ್ರಯೋಗಗಳು ಅಲ್ಲಿಯೇ ನಡೆದಿದ್ದವು.**

ಯ ರಾತ್ರಿ ಪ್ರಯಾಣ. ರಾತ್ರಿ ಪ್ರಯಾಣ ಮಾಡಲು ಚಿಕ್ಕವರು ಮುಂದೆ ಬರಬೇಕು ಎಂದು ಹಿರಿಯರು ಸುಳುವು ಕೊಟ್ಟು 'ಸಾಹಸ ಜೀವನ' ಎಂದು ಸಲಹೆ ನೀಡಿ ಹುರಿದುಂಬಿಸುತ್ತಿದ್ದರು.

ಈ 'ಸಾಹಸ' ಮಾಡಲು ವಿದ್ಯಾರ್ಥಿಗಳೇನೋ ಖುಷಿಯಿಂದ ಮುಂದೆ ಬರುತ್ತಿದ್ದರು: ಆದರೆ ಹಿರಿಯ ವಿಜ್ಞಾನಿಗಳು ಮಾತ್ರ ದೂರವಿರುತ್ತಿದ್ದರು. ಇದಕ್ಕೆ ಕಾರಣ ತಿಳಿದದ್ದು ಬಹಳ ಸಮಯದ ನಂತರ. ರಾತ್ರಿಯಲ್ಲಿ ವಿಮಾನ ದರಗಳು ಕಡಿಮೆ ಇರುತ್ತಿದ್ದುವು!

ಆಗಿನ ಕಾಲದಲ್ಲಿ ಶಿಕಾಗೋ ಪ್ರಪಂಚದಲ್ಲೆಲ್ಲಾ ಬಹಳ ಬ್ಯುಸಿ ಮತ್ತು ದೊಡ್ಡ ವಿಮಾನ ನಿಲ್ದಾಣವಾಗಿದ್ದು . ರಾತ್ರಿಯೂ ಬೇಕಾದಷ್ಟು ಯಾತ್ರಿಗಳು ಓಡಾಡುತ್ತಿದ್ದರು. ಆದ್ದರಿಂದ, ಅಲ್ಲಿ ಇಲ್ಲಿ ಓಡಾಡುತ್ತಾ ಅವರಿವರನ್ನು ನೋಡುತ್ತಾ 3–4 ಗಂಟೆಗಳನ್ನು ಕಳೆಯುವುದು ಕಷ್ಟವೇನಿರಲಿಲ್ಲ. ಅಲ್ಲಿಂದ ಡೆನ್ವರ್ 2 ಗಂಟೆಯ ಪ್ರಯಾಣ. ಅಲ್ಲಿ ಸೇರುವಾಗ ಬೆಳಗ್ಗೆ 5 ಗಂಟೆ. ಏನೇ ಮಾಡಿದರೂ ನಿದ್ರೆ ಆವರಿಸುತ್ತಿದ್ದರಿಂದ ಅಲ್ಲೇ ಯಾವುದಾದರೂ



**ನಮ್ಮ ಡಾರ್ಮಿಟೊರಿ – ವಾಸ, ವರ್ಕಶಾಪ್ ಎಲ್ಲಾ ಅಲ್ಲೇ**

ಕುರ್ಚಿಯ ಮೆಲೆ ಕುಳಿತು 2–3 ಗಂಟೆ ನಿದ್ರೆ ಮಾಡುತ್ತಿದ್ದೆವು..

ಡೆನ್ವರಿನಿಂದ ಎಕೋಲೇಕ್ 55 ಮೈಲಿ ದೂರ. ಡೆನ್ವರಿನಲ್ಲಿ ಇಳಿದಾಗ ಕೆಲವು ವಿಜ್ಞಾನಿಗಳು ಯಾವುದಾದರೂ ಕಾರನ್ನು ಬಾಡಿಗೆಗೆ ತೆಗೆದು–ಕೊಂಡು ಹೋಗುತ್ತಿದ್ದರು. ಅವರೆಲ್ಲಾ ಬರುತ್ತಿದ್ದದ್ದು 3–4 ದಿನಗಳಿಗೆ ಮಾತ್ರ; ವಾಪಸ್ಸು ಹೋಗುತ್ತ ಕಾರನ್ನು ವಿಮಾನ ನಿಲ್ದಾಣದಲ್ಲಿ ಕೊಟ್ಟು ಹೋಗುತ್ತಿದ್ದರು. ಜಾಸ್ತಿ ಸಮಯ ಕೆಲಸಮಾಡಲು ಹೋಗುತ್ತಿದ್ದ ನನ್ನಂತಹ ವಿದ್ಯಾರ್ಥಿಗಳು ಬಸ್ ಹತ್ತುತ್ತಿದ್ದೆವು; ಕೆಲವು ಬಾರಿ ಏನಕ್ಕಾದರೂ ಡೆನ್ವರಿಗೆ ಬಂದಿದ್ದ ಎಕೋಲೇಕ್ ವೀಕ್ಷಣಾಲಯದ ಉಸ್ತುವಾರ ರಾಲ್ಫ್ ಕಾರಿನಲ್ಲಿ ಕರೆದುಕೊಂಡು ಹೋಗುತ್ತಿದ್ದರು. ಮೊದಲ ಬಾರಿ 1968ರಲ್ಲಿ ನನ್ನನ್ನು ಡೆನ್ವರ್ ವಿಮಾನನಿಲ್ದಾಣದಲ್ಲಿ ಭೇಟಿ ಮಾಡಿದ್ದು ಅವರೇ. ನನ್ನನ್ನು ಹೇಗೆ ಗುರುತಿಸುವುದು ಎಂದು ಅವರು ಕೇಳಿದಾಗ '5 ಅಡಿ ಉದ್ದ, 5 ಅಡಿ ಅಗಲ ಇರುವ ವ್ಯಕ್ತಿಯನ್ನು ಹುಡುಕಿ' ಎಂದು ಉತ್ತರ ಬಂದಿದ್ದಂತೆ!.

ಎಕೊಲೇಕಿಗೆ ಹೋಗುವ ಮೊದಲು ಐಡಾಹೊ ಸ್ಪ್ರಿಂಗ್ಸ್ ಎಂಬ ಪುಟ್ಟ ಊರು ಸಿಗುತ್ತದೆ. ಅದು ಪರ್ವತಕ್ಕೆ ಹೋಗುವವರಿಗೆ ಮೊದಲ ಹಂತದ ಬೇಸ್ ಕ್ಯಾಂಪ್ ತರಹ. ಅಲ್ಲಿಯೇ ನಾವು ಆಹಾರ ಸಾಮಗ್ರಿಗಳನ್ನು ಖರೀದಿಮಾಡಿ ತೆಗೆದುಕೊಂಡು ಹೋಗಬೇಕು. ಮಧ್ಯೆ ಬೇರೆ ಯಾವ ಮನೆ, ಅಂಗಡಿಗಳೂ ಇರಲಿಲ್ಲ. ನನ್ನಂತೆ ಹೆಚ್ಚು ಸಮಯ ಕಳೆಯಬೇಕಾದವರು 2–3 ವಾರಗಳಿಗೆ ಬೇಕಾದ ಆಹಾರ ಸಾಮಗ್ರಿಗಳನ್ನು ಒಟ್ಟಿಗೆ ತೆಗೆದು–ಕೊಂಡು ಹೋಗುತ್ತಿದ್ದೆವು. ಆದರೆ ಕೆಲವರು ಸರಿಯಾಗಿ ಯೋಜನೆ ಮಾಡುತ್ತಿರಲಿಲ್ಲ; ಅಥವಾ ಯಾವುದೋ ತರಹದ ಸೋಮಾರಿತನ. ಹೀಗಾಗಿ ಆಗಾಗ್ಗೆ ಅಡುಗೆಮನೆಯಿಂದ ನಾವು ತಂದಿದ್ದ ವಸ್ತುಗಳು ಮಾಯವಾಗುತ್ತಿದ್ದದ್ದು ಸಾಮಾನ್ಯ!

ಐಡಾಹೊ ಸ್ಪ್ರಿಂಗ್ಸ್‌ನಿಂದ ಎಕೊಲೇಕ್ 20ಕಿಮೀ. ಪರ್ವತ ರಸ್ತೆಯಾದ್ದರಿಂದ ಪಯಣಿಸಲು ಒಂದು ಗಂಟೆಯಾದರೂ ಬೇಕಾಗಿತ್ತು. ಬಯಲು ಪ್ರದೇಶಗಳಿಂದ ಬಂದ ಕೆಲವರಿಗೆ ಆ ಎತ್ತರದಲ್ಲಿ ಇರುವುದು ಆಗುತ್ತಿರಲಿಲ್ಲ. ಆಕ್ಸಿಜೆನ್ ಪ್ರಮಾಣ ಸಮುದ್ರ ಮಟ್ಟದಲ್ಲಿರುವುದರ ಶೇಕಡ 60ರಷ್ಟು ಮಾತ್ರ ಇರುವುದರಿಂದ ಉಸಿರಾಡುವುದು ಕಷ್ಟವಾಗುತ್ತಿತ್ತು. ಅಂತಹವರು ಎಕೋಲೇಕಿಗೆ ಬಂದರೆ ಮಾರನೆಯ ದಿನವೇ ವಾಪಸ್ಸು ಹೋಗುತ್ತಿದ್ದರು. ಏನೇ ಇರಲಿ, ಚಿಕ್ಕವರಾಗಿದ್ದರಿಂದ ನಮಗೆ ಎತ್ತರದ ಪ್ರಭಾವ ತಟ್ಟಲಿಲ್ಲವೋ ಏನೋ. ಅಲ್ಲಿ ಎಲ್ಲಕ್ಕಿಂತ ಮುಖ್ಯವಾದದ್ದು ಪ್ರಯೋಗವನ್ನು ನಡೆಸಿಕೊಂಡು ಹೋಗುವುದಾದರೂ, ಕೆಲವರು ಬೇರೆ ಬೇರೆ ಹವ್ಯಾಸವನ್ನೂ ಇಟ್ಟುಕೊಂಡಿದ್ದರು. ಮೊದಲನೆಯದು "ಸ್ಕೀ" (ski) ಮಾಡುವುದು. ಸುಮಾರು ಹತ್ತಿರದಲ್ಲೆ ಉತ್ತಮ ಸ್ಕೀ ಜಾಗಗಳಿದ್ದವು. ಕೆಲವು ವಿಜ್ಞಾನಿಗಳು ಸ್ಕೀ ಮಾಡಲೆಂದೇ ಬಂದು ಹೋಗುತ್ತಿದ್ದರೆಂದು

ಗಾಳಿಸುದ್ದಿಯೂ ಇದ್ದಿತು. ನಾನು ಸ್ಕೀ ಕಲಿಯಲಿಲ್ಲ ಎನ್ನುವುದು ನನ್ನ ಹಲವಾರು ಪಶ್ಚಾತ್ತಾಪಗಳಲ್ಲಿ ಒಂದು.

ನಾಯಿಕೊಡೆಗಳನ್ನು ಹುಡುಕುವುದು ಮತ್ತೊಂದು ಹವ್ಯಾಸವಾಗಿತ್ತು. ಕೆಲವರು ಅಲ್ಲಿ ಇಲ್ಲಿ ಓಡಾಡಿ ವಿವಿಧ ಆಕಾರದ ವಿವಿಧ ಬಣ್ಣಗಳ ನಾಯಿಕೊಡೆಗಳನ್ನು ತರುತ್ತಿದ್ದರು. ಕೆಲವಂತೂ ಬಹಳ ಸುಂದರವಾಗಿದ್ದವು. ಆದರೆ ಅವುಗಳಲ್ಲಿ ಕೆಲವು ವಿಷ ಎಂದು ಬಿಸಾಕುತ್ತಿದ್ದರು ಕೂಡ. ನಾನು ಅಲ್ಲಿಗೆ ಹೋದ ಮಾರನೆಯ ದಿನವೇ ರಾಲ್ಫ ಯಾರಿಗೋ ನಿನ್ನೆ ರಾತ್ರಿ ಕರಡಿ ಬಂದು ಹೋಯಿತು ಎಂದು ಹೇಳುತ್ತಿದ್ದರು. ಇಂಡಿಯಾದಿಂದ ಬಂದದ್ದು ಕರಡಿಯ ಕೈಗೆ ಬೀಳುವುದಕ್ಕಾ ಎಂದು ಒಂದು ನಿಮಿಷ ಭಯಗೊಂಡಿದ್ದೆ. ಹೆದರಿದಂತೆ ಕಂಡ ನನ್ನನ್ನು "ಚಿಂತೆ ಬೇಡ. ವಾರಕ್ಕೆ



**ಅಂತರಜಾಲದಿಂದ ಒಂದು ಚಿತ್ರ. ನನ್ನ ಅನುಭವವೂ ಸುಮಾರು ಇದೇ ರೀತಿ ಇತ್ತು !**

ಒಂದೆರಡುಬಾರಿ ಬರುತ್ತವೆ. ಕಸದ ಡಬ್ಬವನ್ನು ಉರುಳಾಡಿಸಿ ಸಿಕ್ಕಿದ್ದನ್ನು ತಿಂದುಕೊಂಡು ಹೋಗುತ್ತವೆ. ಅಷ್ಟೆ. ರಾತ್ರಿ ಹೊರಗೆ ಓಡಾಡಬೇಡ" ಎಂದು ಸಮಾಧಾನ ಪಡಿಸಿದರು !

ಹಲವಾರು ವಿಜ್ಞಾನಿಗಳು ಅಲ್ಲಿ ಒಟ್ಟಿಗೆ ನೆರೆದಾಗ ಪ್ರಯೋಗದ ಬಗ್ಗೆ ಚರ್ಚೆಗಳು ಇರುತ್ತಿದ್ದವಷ್ಟೆ. ಆಡಳಿತಕ್ಕೆ ಸಂಬಧ ಪಟ್ಟ ಚರ್ಚೆಗಳಿಗೆ ವಿದ್ಯಾರ್ಥಿಗಳನ್ನು ಕರೆಯುತ್ತಿರಲಿಲ್ಲ. ಆದರೆ ವಿಜ್ಞಾನದ ಚರ್ಚೆಗಳಲ್ಲಿ ಎಲ್ಲರೂ ಇರುತ್ತಿದ್ದೆವು. ವಿರಾಮದ ಸಮಯದಲ್ಲಿ, ಅಥವಾ ಪ್ರಯೋಗದಲ್ಲಿ ಉಪಕರಣಗಳೆಲ್ಲಾ ಸಹಕರಿಸುತ್ತಿದ್ದಾಗ, ಬೇರೆಯ ಚರ್ಚೆಗಳೂ ಇರುತ್ತಿದ್ದವು. ಅದು ಅಮೆರಿಕದ ಜೀವನದಲ್ಲಿ ಮಹತ್ತರ ಬದಲಾವಣೆಗಳು ಆಗುತ್ತಿದ್ದ ಸಮಯ; ಸ್ವಲ್ಪ ಅಲ್ಲೋಲಕಲ್ಲೋಲ ಸಮಯವೆಂದೂ ಹೇಳಬಹುದು. ಬೇರೆ ಜೀವನ ಶೈಲಿಗಳತ್ತ ಯುವಜನತೆ ನೋಡಲು ಶುರು ಮಾಡಿತ್ತು. ಕಾಲೇಜು ಕ್ಯಾಂಪಸುಗಳಲ್ಲಿ ಹಿಪ್ಪಿಗಳೂ ಹೆಚ್ಚಾಗುತ್ತಿದ್ದರು. ಸ್ತ್ರೀವಾದವೂ ಮೇಲೇಳುತ್ತಿತ್ತು. ಆದರೆ ಬಿಳಿ–ಕಪ್ಪು ಜನರ ಘರ್ಷಣೆಗಳು ಇದ್ದೇ ಇದ್ದವು. ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಅನೇಕರು, ಅದೂ ವಿದ್ಯಾರ್ಥಿಗಳು, ವಿಯಟ್ನಾಮಿನಲ್ಲಿ ಅಮೆರಿಕದ ಯೋಜನೆಗಳನ್ನು ವಿರೋಧಿಸುತ್ತಿದ್ದರು. ಸಾಮಾನ್ಯವಾಗಿ ಭೌತವಿಜ್ಞಾನಿಗಳು ಉದಾರವಾದಿಗಳಾಗಿದ್ದು ವಿಯಟ್ನಾಮ್ ಬಗ್ಗೆ ಸರ್ಕಾರದ ಟೀಕೆ ಬಹಳವೇ ಇರುತ್ತಿತ್ತು, ಈ ವಿಷಯಗಳ ಬಗ್ಗೆ ಹೊಸಬನಾದ ನನಗೆ ಹೆಚ್ಚು ಮಾಹಿತಿ ಸಿಕ್ಕಿ ಆಸಕ್ತಿ ಹೆಚ್ಚಾಗಿದ್ದೂ ಅಲ್ಲೇ! ಆಕಾಶ ನೋಡುವ ನಾವು ಭೂಮಿಯ ಮೇಲಿನ ವಿದ್ಯಮಾನಗಳಿಗೆ ತೆರೆದುಕೊಳ್ಳುತ್ತಿದ್ದೆವು.

ಸಾಮಾನ್ಯವಾಗಿ ರಾತ್ರಿ ಕೆಲಸವೆಲ್ಲವೂ ವಿದ್ಯಾರ್ಥಿಗಳಿಗೇ ಬೀಳುತ್ತಿತ್ತು. ಹೀಗಾಗಿ ಅದಕ್ಕೆ ಗ್ರೇವ್ ಯಾರ್ಡ್ ಶಿಫ್ಟ್, 'ರಾತ್ರಿ ಸ್ಮಶಾನ ಕಾಯುವ ಸಮಯ' ಎಂದು ಅಡ್ಡ ಹೆಸರೂ ಇತ್ತು. ಬೆಳಗಿನ ಹೊತ್ತು ಬೇರೆ ವಿಷಯಗಳಿಗೆ ಗಮನ ಕೊಡಬಹುದಾದ್ದರಿಂದ ಒಂದು ರೀತಿಯಲ್ಲಿ ನಮಗೆ ಇದು ಚೆನ್ನಾಗಿಯೆ ಇದ್ದಿತು. ಮುಂದೆ ನಾನು ಖಗೋಳ ವಿಜ್ಞಾನಿಯಾದಾಗ ರಾತ್ರಿಯೆಲ್ಲಾ ಎದ್ದಿರಲು ಇದು ಒಂದು ತರಹದ ತರಬೇತಿಯೂ ಆಯಿತು.

ಮೇ ತಿಂಗಳು ಸಾಮಾನ್ಯವಾಗಿ ಹಿಮ ಕಡಿಮೆಯಾಗುವ ತಿಂಗಳು. ಆದರೆ ನಾನು ಅಲ್ಲಿಗೆ ಹೋದ ಮರುವರ್ಷದ ಮೇ ತಿಂಗಳಿನಲ್ಲಿ ಹಿಮ ಒಂದೇ ಸಮ ಸುರಿಯಿತು. ಮೊದಲು ವಿದ್ಯುತ್ ಸಂಪರ್ಕ ಕಡಿದು ಹೋಯಿತು. ನಂತರ ಟೆಲಿಫೋನ್ ಸಂಪರ್ಕವೂ ಹೋಯಿತು. ವಿದ್ಯುಚ್ಛಕ್ತಿ ಇಲ್ಲದಿದ್ದರಿಂದ ಮನೆಯ ಶಾಖ ಕಡಿಮೆಯಾಗತೊಡಗಿ ಒಳಗಡೆಯೂ ನಾವು ನಡುಗಲಾರಂಭಿಸಿದೆವು. ನೀರನ್ನು ಪಂಪ್ ಮಾಡಲೂ ಅಗದಿದ್ದರಿಂದ ಕುಡಿಯುವ ನೀರಿಗೆ ತೊಂದರೆ ಬಂದಿತು. ಸದ್ಯ, ಗ್ಯಾಸ್ ಸ್ಟೋವ್ ಕೆಲಸ ಮಾಡುತ್ತಿದ್ದರಿಂದ ಹಿಮವನ್ನು ಕಾಯಿಸಿ ನೀರು ಮಾಡಿಕೊಂಡೆವು. ಸ್ನಾನಕ್ಕೆ ಕೊಕ್‌ಕೊಟ್ಟೆವು. ಇದ್ದವರು ಮೂರು ಜನ? ಜಾನ್ ಲರ್ನೆಡ್ ಮತ್ತು ಎರಿಕ್ಸನ ಎಂಬ ವಿಜ್ಞಾನಿಗಳು, ವಿದ್ಯಾರ್ಥಿ ನಾನು. ರಾಲ್ಫ್ ಸ್ವಲ್ಪ ದೂರದ ಟ್ರೈಲರಿನಲ್ಲಿದ್ದರು ಎಲ್ಲರೂ ಬೆವರಿನ ವಾಸನೆಯನ್ನು ಹೊರಸುಸುತ್ತಿದ್ದರಿಂದ ಯಾರೂ ಇನ್ನೊಬ್ಬರ ಹತ್ತಿರ ಹೋಗುತ್ತಿರಲಿಲ್ಲ. ನಮ್ಮ ಮಿಶಿಗನ್ ಪ್ರೊಫೆಸರು ಹ್ಯಾಮ್ ರೇಡಿಯೊ ಮೂಲಕ ನಮ್ಮ ಯೋಗಕ್ಷೇಮವನ್ನು ವಿಚಾರಿಸಿಕೊಂಡರು. ಎಲ್ಲರೂ ಸುಸ್ತಾಗಿಬಿಟ್ಟಿದ್ದೆವು. ಸಾಮಾನ್ಯವಾಗಿ ಸೌಮ್ಯದಿಂದ ಇರುತ್ತಿದ್ದ ಕೆನ್ ಕೂಡ ಕಂಡಕಂಡಿದ್ದಕ್ಕೆ ರೇಗಲು ಆರಂಭಿಸಿದ್ದ. ಹೇಗೋ 4–5 ದಿನ ಕಳೆದ ನಂತರ ಹಿಮನಿಂತು ಕಡೆಗೂ ಸೂರ್ಯ ಹೊರಬಂದ. ಆದರೆ ಹಿಮದಿಂದ ಪ್ರತಿಫಲಿಸುತ್ತಿದ್ದ ಬಿಸಿಲು ಕಣ್ಣಿಗೆ ಹೊಡೆಯುತ್ತಿತ್ತು. ಈಗ ಎಲ್ಲರಿಗೂ ಪ್ರಶ್ನೆ ಹುಟ್ಟಿತು. ಎಷ್ಟು ಹಿಮಪಾತವಾಯಿತು? ಒಬ್ಬೊಬ್ಬರು ಒಂದೊಂದು ಸಂಖ್ಯೆಯನ್ನು ಹೇಳಿದರು. ಆದರೆ ವಿಜ್ಞಾನಿಗಳಲ್ಲವೆ? ಪ್ರಯೋಗವಿಲ್ಲದೆ ಪರೀಕ್ಷೆ ಹೇಗೆ ಸಾಧ್ಯ? ಒಂದು ಹಳ್ಳ ತೋಡಿಬಿಡೋಣ ಎಂಬ ಸಲಹೆ ಬಂದಿತು. ಸರಿ, ನಮ್ಮೆಲ್ಲರ ಶ್ರಮದಾನದಿಂದ ಲ್ಯಾಬಿನ ಪಕ್ಕವೇ ಹಳ್ಳ ತೋಡಿಯಾಯಿತು. ಆದರೆ ಆಳತೆ? ಅಷ್ಟು ಉದ್ದದ ಇಂಚುಪಟ್ಟಿ ಇರಲಿಲ್ಲ. ಯಾರನ್ನಾದರು ಇಳಿಬಿಡಬಹದಲ್ಲ? ಯಾರನ್ನು? ನಿಧಾನವಾಗಿ ಎಲ್ಲರೂ ನನ್ನ ಕಡೆ ನೋಡಲಾರಂಭಿಸಿದರು. "ವಿಶ್ ಇಳಿದರೆ ಚೆನ್ನಾಗಿರುತ್ತೆ. ಬಹಳ ಹಿಮ ಬಿದ್ದಿತು ಎಂದು ನೋಡಿದವರು ತಿಳಿದು ಕೊಳ್ಳುತ್ತಾರೆ 'ಎಂದು ಜಾನ್ ನಗುತ್ತಾ ಹೇಳಿದರು. ಎಲ್ಲರೂ ಒಪ್ಪಿದರು. ಸರಿ. ಎಲ್ಲಾ ಚಪ್ಪಾಳೆ ಹೊಡೆಯಲು ಶುರುಮಾಡಿದರು. ನಾನೂ ನಿಧಾನವಾಗಿ ಇಳಿದೆ. ಹಿಮ ನನ್ನ ಕಿವಿಯ ತನಕ ಬಂದಿತ್ತು. ನಾನು 5 ಅಡಿ 2 ಇಂಚು ಇದ್ದೆ . ನಾಲ್ಕೂ ಮುಕ್ಕಾಲು ( 4 ¾ ) ಅಡಿಯಾದರೂ ಆಳವಿರಬೇಕು ಎಂದು ಮಾತಾಡಿಕೊಳ್ಳುತ್ತ ಹಳ್ಳದಲ್ಲಿ ನಿಂತಿದ್ದ ನನ್ನನ್ನು ಸ್ವಲ್ಪಕಾಲ ಮರೆತರು. ಸರಿ ಫೋಟೋ ತೆಗೆದುಕೊಂಡು ನನ್ನನ್ನು ಮೇಲೆ ಎಳೆದುಕೊಂಡರು. ಫೋಟೋ ಅಲ್ಲಿ ಇಲ್ಲಿ ಪ್ರಕಟವಾಯಿತು ಎಂದು ಕೇಳಿದೆ. ಅದರೆ ನಾನು ಅದನ್ನು ನೋಡಿಲ್ಲ. ಕನ್ನಡದಲ್ಲಿ ಒಂದು ಗಾದೆ ಇದೆಯಲ್ಲವೆ: ಕಂಡವರ ಮಕ್ಕಳನ್ನು ಬಾವಿಗೆ ಹಾಕಿ ಆಳ ನೋಡಿದರಂತೆ!

*ಡಾ. ಪಾಲಹಳ್ಳಿ ವಿಶ್ವನಾಥ ಟಾಟಾ ಇನ್ಸ್‌ಟಿಟ್ಯೂಟ್ ಆಫ್ ಫಂಡಮೆಂಟಲ್ ರೀಸರ್ಚ್ ಸಂಸ್ಥೆಯಲ್ಲಿ ಖಗೋಳ ವಿಜ್ಞಾನಿಗಳಾಗಿದ್ದವರು. ಕನ್ನಡದಲ್ಲಿ ವಿಜ್ಞಾನ ಮತ್ತು ಹಾಸ್ಯ ಬರವಣಿಗೆಗಳಲ್ಲಿ ಸಿದ್ಧ ಹಸ್ತರು.*

# ಆಕಾಶ ನಕ್ಷೆ

## ಏಪ್ರಿಲ್ 2022

ಏಪ್ರಿಲ್ 2022 ತಿಂಗಳ ಖಗೋಳ ವಿದ್ಯಮಾನಗಳು :

### ಆಕಾಶನಕ್ಷೆ ಬಳಸುವ ವಿಧಾನ

ಆಗಸದತ್ತ ದೃಷ್ಟಿ ನೆಟ್ಟು, ನಿಮ್ಮ ಕಣ್ಣೆದುರು ನಕಾಶೆಯನ್ನು ಹಿಡಿಯಿರಿ. ನಕ್ಷೆಯಲ್ಲಿ ತೋರಿಸಿರುವ ದಿಕ್ಕುಗಳನ್ನು, ನಮ್ಮ ಭೂಮಿಯ ದಿಕ್ಕುಗಳಿಗೆ ಸರಿಹೊಂದಿಸಿ. ಈಗ ನಕ್ಷೆಯಲ್ಲಿ ತೋರಿಸಿರುವ ನಕ್ಷತ್ರಪುಂಜಗಳನ್ನು, ಗ್ರಹಗಳನ್ನು ಹಾಗೂ ನಕ್ಷತ್ರಗಳನ್ನು ಆಗಸದಲ್ಲಿ ಗುರುತಿಸಲು ಪ್ರಯತ್ನಿಸಿ.

ಉತ್ತರ
ಪೊಲಾರಿಸ್ (ಧ್ರುವ ನಕ್ಷತ್ರ)
ಉರ್ಸಾ ಮೈನರ್
ಡ್ರಾಕೊ
ಕ್ಯಾಮಲೊಪರ್ಡಾಲಿಸ್
ಕ್ಯಾಪೆಲ್ಲಾ (ನಕ್ಷತ್ರ)
ಆರಿಗಾ
ಮೈಜರ್ ಮತ್ತು ಅಲ್ಕಾರ್ (ವಸಿಷ್ಠ ಮತ್ತು ಅರುಂಧತಿ ನಕ್ಷತ್ರ)
ಉರ್ಸಾ ಮೇಜರ್ (ಸಪ್ತರ್ಷಿ ಮಂಡಲ)
ಹರ್ಕ್ಯುಲಸ್
ಕೊರೊನ ಬೋರಿಯಾಲಿಸ್
ಬೂಟಿಸ್
ಆರ್ಕ್ಟುರಸ್ (ನಕ್ಷತ್ರ)
ಕ್ಯಾಸ್ಟರ್ (ನಕ್ಷತ್ರ)
ಪೊಲಕ್ಸ್ (ನಕ್ಷತ್ರ)
ಜೆಮಿನಿ (ಮಿಥುನ)
ಕ್ಯಾನ್ಸರ್ (ಕರ್ಕ)
ಬೀಟಲ್ ಜೀಸ್ (ನಕ್ಷತ್ರ)
ಲಿಯೋ (ಸಿಂಹ)
ರೆಗ್ಯೂಲಸ್ (ನಕ್ಷತ್ರ)
ಕ್ಯಾನಿಸ್ ಮೈನರ್
ಪ್ರೊಕ್ಯಾನ್ (ನಕ್ಷತ್ರ)
ಪೂರ್ವ
ಪಶ್ಚಿಮ
ಒಫಿಯುಕಸ್
ವರ್ಗೋ (ಕನ್ಯಾ)
ಲಿಬ್ರಾ (ತುಲಾ)
ಸ್ಪೈಕಾ (ಚಿತ್ರ ನಕ್ಷತ್ರ)
ಕ್ರೇಟರ್
ಹೈಡ್ರಾ
ಸಿರಿಯಸ್ (ನಕ್ಷತ್ರ)
ಕೊರ್ವಸ್
ಕ್ಯಾನಿಸ್ ಮೇಜರ್
ಅಂಟರಿಸ್ (ನಕ್ಷತ್ರ)
ಸ್ಕೋರ್ಪಿಯಸ್
ಪೈಕ್ಸಿಸ್
ಪಪ್ಪಿಸ್
ಸೆಂಟಾರಸ್
ಲ್ಯೂಪಸ್
ವೇಲಾ
ಗಾಕ್ರಕ್ಸ್ (ನಕ್ಷತ್ರ)
ಕ್ರಕ್ಸ್
ಎ.ಕ್ರಕ್ಸ (ನಕ್ಷತ್ರ)
ರೈಜಿಲ್ ಕೆಂಟಾರಸ್ (ನಕ್ಷತ್ರ)
ಕ್ಯಾರಿನ
ಮುಸ್ಕಾ
ದಕ್ಷಿಣ

ಸ್ಥಳ : ಬೆಂಗಳೂರು,13.0000°N, 77.0000°E
: 20 ಏಪ್ರಿಲ್ 2022, 22:00 (UTC +05:30)

**ಏಪ್ರಿಲ್ 1**

ಈ ದಿನ ಅಮಾವಾಸ್ಯೆ.

**ಏಪ್ರಿಲ್ 4**

ಈ ದಿನ ಮಂಗಳ ಗ್ರಹ ಹಾಗೂ ಶನಿಗ್ರಹದ ಸಂಯೋಗ ಜರುಗಲಿದೆ. ಇಂದು ಮುಂಜಾನೆ ಮಕರರಾಶಿಯಲ್ಲಿ ಪರಸ್ಪರ ಅತಿ ಸನಿಹ ಬಂದಿರುವ ಈ ಜೋಡಿಯನ್ನು ಕಾಣಬಹುದು. ಈ ಎರಡೂ ಗ್ರಹಗಳ ನಡುವೆ ಕೇವಲ ಒಂದು ಡಿಗ್ರಿಯ 1/3ರಷ್ಟು ಅಂತರವಿರಲಿದೆ.

**ಏಪ್ರಿಲ್ 21–22**

ಲೈರಾ ನಕ್ಷತ್ರಪುಂಜದಿಂದ ಹೊರಟಂತೆ ಕಾಣುವ 'ಲೈರಿಡ್ಸ್ ಉಲ್ಕಾವರ್ಷ' ಈ ರಾತ್ರಿ ಉಚ್ಛಮಟ್ಟದಲ್ಲಿರುತ್ತದೆ. ಹಿಂದೊಮ್ಮೆ 'ಸಿ/1861 ಜಿ1' ಅಥವಾ 'ಥ್ಯಾಚರ್' ಎಂಬ ಧೂಮಕೇತು ತಾನು ಸಾಗುವಾಗ ಹಾದಿಯುದ್ದಕ್ಕೂ ಚೆಲ್ಲಿ ಹೋದ ಪಳೆಯುಳಿಕೆಗಳು ಭೂ ವಾತಾವರಣವನ್ನು ಪ್ರವೇಶಿಸಿದಾಗ ಈ ಉಲ್ಕಾವರ್ಷ ಸಂಭವಿಸುತ್ತದೆ. ಈ ಉಲ್ಕಾ ವರ್ಷವನ್ನು ಕ್ರಿಸ್ತ ಪೂರ್ವ ಕಾಲದಿಂದಲೂ, ಅನೇಕ ನಾಗರೀಕತೆಗಳು ಗಮನಿಸಿದ ಬಗ್ಗೆ ದಾಖಲೆಗಳಿವೆ.

ಎ. ಇ. ಥ್ಯಾಚರ್ ಎಂಬ ಹವ್ಯಾಸಿ ಖಗೋಳಶಾಸ್ತ್ರಜ್ಞರು ಅನ್ವೇಷಿಸಿದ ಈ ಧೂಮಕೇತು ಇತ್ತೀಚೆಗೆಂದರೆ 1861ರಲ್ಲಿ ನಮ್ಮ ಸೌರವ್ಯೂಹವನ್ನು ಹಾದುಹೋಗಿತ್ತು. ಹಾಗೂ 2276ನೇ ಇಸವಿಯಲ್ಲಿ ಇದು ಮತ್ತೊಮ್ಮೆ ಮರಳುವ ನಿರೀಕ್ಷೆಯಿದೆ.

**ಏಪ್ರಿಲ್ 16**

ಈ ದಿನ ಹುಣ್ಣಿಮೆ. ಈ ತಿಂಗಳ ಪೂರ್ಣ ಚಂದ್ರನನ್ನು 'ಗುಲಾಬಿ ಚಂದ್ರ' ನೆಂದು ಕರೆಯುವ ರೂಢಿಯಿದೆ. ಬಹುತೇಕ ಗುಲಾಬಿ ಬಣ್ಣದಲ್ಲಿ ಕಂಡುಬರುವ 'ಫ್ಲಾಕ್ಸ್ ಸುಬುಲತ' ಎಂಬ ಹೂವು ಉತ್ತರ ಅಮೇರಿಕದಲ್ಲಿ ಈ ಸಮಯದಲ್ಲೇ ಅರಳುತ್ತದೆ. ಈ ಕಾರಣದಿಂದಲೇ ಆ ಭಾಗದಲ್ಲಿ ಚಂದ್ರನಿಗೆ 'ಗುಲಾಬಿ ಚಂದ್ರ' ಎಂಬ ಹೆಸರು ಬಂದಿದೆ.

**ಏಪ್ರಿಲ್ 30**

ದಕ್ಷಿಣ ಗೋಳಾರ್ಧದ ದಕ್ಷಿಣ ತುದಿಯ ಅನೇಕ ಪ್ರದೇಶಗಳಲ್ಲಿ ಈ ದಿನ ಪಾರ್ಶ್ವ ಸೂರ್ಯಗ್ರಹಣ ಉಂಟಾಗಲಿದೆ. ದಕ್ಷಿಣ ಅಮೇರಿಕದ ದಕ್ಷಿಣ ಭಾಗ, ಅಂಟಾರ್ಕ್ಟಿಕ ಖಂಡ ಹಾಗೂ ಪೆಸಿಫಿಕ್ , ಅಟ್ಲಾಂಟಿಕ್ ಸಾಗರಗಳ ಕೆಲ ಭಾಗಗಳಿಂದ ಗ್ರಹಣ ವೀಕ್ಷಣೆ ಮಾಡಬಹುದಾಗಿದೆ.

*ವೇಣುಗೋಪಾಲ ಗಾಂವ್ಕರ್,*
*ಬೆಂಗಳೂರು ಹವ್ಯಾಸಿ ಖಗೋಳವಿಜ್ಞಾನಿಗಳ ಸಂಘ.*



(ವಿ. ಸೂ. : ಈ ಆಕಾಶ ನಕ್ಷೆಯನ್ನು ಡೌನ್ಲೋಡ್ ಮಾಡಿಕೊಂಡು ಉಪಯೋಗಿಸಲು, ಇದರೊಂದಿಗೆ ಕೊಟ್ಟಿರುವ ಅನ್ನು ಸ್ಕ್ಯಾನ್ ಮಾಡಿ. ರಾತ್ರಿಯಾಗಸವನ್ನು ವೀಕ್ಷಿಸುವಾಗ, ಬೆಳಕಿಗೆ, ಕೆಂಪು ಬಣ್ಣದ ದೀಪಗಳನ್ನು ಬಳಸುವುದು ಒಳ್ಳೆಯದು. ಈ ನಕ್ಷೆಯನ್ನು ಬೆಂಗಳೂರಿನ ಸ್ಥಾನಕ್ಕೆ ಅನುಗುಣವಾಗಿ ತಯಾರಿಸಿದ್ದರೂ, ಅತ್ಯಲ್ಪ ಬದಲಾವಣೆಗಳನ್ನು ಗಣನೆಗೆ ತೆಗೆದುಕೊಂಡು, ಬೇರೆ ಸ್ಥಾನಗಳಲ್ಲೂ ಬಳಸಬಹುದು.)

# ಡೈಹೈಡ್ರೋಜನ್ ಮೊನಾಕ್ಸೈಡ್

## ಎನ್ನುವ ಎರಡಲಗಿನ ಕತ್ತಿ

ವಸ್ತುವಿಜ್ಞಾನಿಗಳು ಡೈಹೈಡ್ರೋಜನ್ ಮೊನಾಕ್ಸೈಡ್ ಎನ್ನುವ ಹಾನಿಕಾರಕ ವಸ್ತುವನ್ನು ಪತ್ತೆ ಮಾಡಿ ಅಧ್ಯಯನ ನಡೆಸುತ್ತಿರುವ ಸುದ್ದಿ ಬಂದಿದೆ. ಇದು ನಮ್ಮ ನೆಲ ನದಿ ತೊರೆಗಳು ಹಾಗೂ ಗಾಳಿಯಲ್ಲಿಯೂ ಕಾಣಿಸಿಕೊಂಡಿದೆ. ಕೂಲಂಕಷವಾಗಿ ಇದನ್ನು ಅಧ್ಯಯನ ನಡೆಸುತ್ತಿರುವ ವಿಜ್ಞಾನಿಗಳು ಮನುಷ್ಯರು ಹಾಗೂ ಪ್ರಾಣಿಗಳ ಮೇಲೆ ಇದು ಬೀರುವ ಹಲವಾರು ಪರಿಣಾಮಗಳನ್ನು ಪಟ್ಟಿ ಮಾಡಿದ್ದಾರೆ. ಈ ಬಗ್ಗೆ ಜನರ ಗಮನ ಸೆಳೆಯಲು ಪ್ರಯತ್ನಿಸುತ್ತಿದ್ದಾರೆ. ಇದು ಯಾವುದೇ ಒಂದು ದೇಶದ ಸಮಸ್ಯೆಯಲ್ಲ. ಪ್ಲಾಸ್ಟಿಕ್ ನಂತೆ ಇದೊಂದು ಜಾಗತಿಕ ಸಮಸ್ಯೆಯೆಂದು ಇತ್ತೀಚೆಗೆ ಈ ಬಗ್ಗೆ ವರದಿ ಮಾಡಿರುವ ಟಿ ಐ ಎಸ್ ಎಸ್ ಅಥವಾ ಟ್ರೆಂಡ್ಸ್ ಇನ್ ಸ್ಪ್ಯೂರಿಯಸ್ ಸೈನ್ಸ್ ಪತ್ರಿಕೆ ಪ್ರಕಟಿಸಿದೆ. ಡೈಹೈಡ್ರೋಜನ್ ಮೊನಾಕ್ಸೈಡ್ ಮಾಡುವ ಹಾನಿಗಳು ಒಂದೆರಡಲ್ಲ. ಮೊದಲನೆಯದಾಗಿ ಇದು ಕಡುವಾದ ಆಮ್ಲ ಗುಣವಿರುವ ವಸ್ತು. ಇದಕ್ಕೆ ತೆರೆದುಕೊಂಡ ಕಬ್ಬಿಣ ಮತ್ತು ಉಕ್ಕು ಕೂಡ ಕ್ರಮೇಣವಾಗಿ ತುಕ್ಕು ಹಿಡಿದುಬಿಡಬಹುದು. ಇನ್ನೂ ಕೆಲವು ಲೋಹಗಳನ್ನಂತು ಇದು ತಕ್ಷಣವೇ ಕರಗಿಸಿಬಿಡುವಷ್ಟು ಶಕ್ತಿಶಾಲಿ. ಸೂರ್ಯನ ಜೊತೆಗಂತೂ ಬಲು ಸ್ಫೋಟಕ ರೀತಿಯಲ್ಲಿ ಇದು ಪ್ರತಿಕ್ರಿಯಿಸುತ್ತದೆ. ಅಷ್ಟೇ ಅಲ್ಲ ಸೂರ್ಯನು ಹಾಳಾಗುವ ಮಾತಿರಲಿ. ಆಗ ಬಿಡುಗಡೆಯಾಗುವ ಅನಿಲಗಳು ಇನ್ನಷ್ಟು ಸ್ಫೋಟಕ ಗುಣವುಳ್ಳವು ಎನ್ನುತ್ತದೆ ಪತ್ರಿಕೆ. ಇದನ್ನು ಉಸಿರಾಡಿದವರು ಬಹುಶಃ ಬದುಕುವುದಿಲ್ಲ. ಡೈಹೈಡ್ರೋಜನ್ ಮೊನಾಕ್ಸೈಡ್ ಅನ್ನು ಉಸಿರಾಡಿದ್ದರಿಂದಲೇ ಪ್ರತೀ ವರ್ಷ ಸಾವಿರಾರು ವ್ಯಕ್ತಿಗಳು ಸಾವನ್ನಪ್ಪುತ್ತಿದ್ದಾರೆ ಎನ್ನುತ್ತದೆ ಈ ವರದಿ. ಬಣ್ಣ, ವಾಸನೆ, ರುಚಿ ಯಾವುದೂ ಇಲ್ಲದದಿರುವುದರಿಂದ ಇದರ ಹಾನಿಕಾರಕ ಗುಣ ಸುಲಭವಾಗಿ ಎಲ್ಲರಿಗೂ ತಿಳಿಯುವುದಿಲ್ಲ. ಗಾಜಿನಂತೆ ಬಲು ಪಾರದರ್ಶಕವೂ ಅಂತೆ. ಪ್ರಪಂಚದಲ್ಲಿರುವ ಬಹುತೇಕ ನದಿ, ಬಾವಿ ತೊರೆ ಸಾಗರಗಳಲ್ಲಿ ಇದನ್ನು ಗುರುತಿಸಲಾಗಿದೆ. ನಗರ ಪ್ರದೇಶಗಳಲ್ಲಿರುವ ಕಾರ್ಖಾನೆಗಳು ಹಾಗೂ ಮನೆಗಳಿಂದ ಹೊರಸುರಿದ ಈ ವಸ್ತು ಬಹುತೇಕ ಎಲ್ಲ ನದಿ ಬಾವಿ ತೊರೆಗಳನ್ನು ಮಲಿನಗೊಳಿಸಿದೆಯಂತೆ. ಇದರ ಮಾಲಿನ್ಯತೆಯ ಪ್ರಮಾಣ ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗುತ್ತದೆ. ಗಾಳಿಯಲ್ಲಿಯೂ ಇದು ಸಾಕಷ್ಟು ಪ್ರಮಾಣದಲ್ಲಿ ಇದೆ ಎನ್ನುತ್ತದೆ ವರದಿ. ವಾತಾವರಣದಲ್ಲಿ ಸೇರಿಕೊಂಡ ಇದು ಆಮ್ಲಮಳೆಗೂ ಮೂಲವಂತೆ. ನಮ್ಮ ದೇಹದಲ್ಲಿಯೂ ಇದು ಕಾಣಿಸಿದೆ. ಗಾಯವಾದಾಗ ಇಲ್ಲವೇ ರಕ್ತ ಸುರಿದಾಗ ಡೈಹೈಡ್ರೋಜನ್ ಮೊನಾಕ್ಸೈಡ್ ಹೊರಸುರಿಯುವುದನ್ನು ಕಾಣಲಾಗಿದೆ. ಇಷ್ಟು ಪ್ರಭಾವಶಾಲಿ ರಾಸಾಯನಿಕವನ್ನು ಸದುಪಯೋಗ ಮಾಡುವ ಬಗ್ಗೆ ವೈಜ್ಞಾನಿಕ ಜಗತ್ತಿನಲ್ಲಿ ಚರ್ಚೆಗಳು ನಡೆಯುತ್ತಿವೆ. ಡೈಹೈಡ್ರೋಜನ್ ಮೊನಾಕ್ಸೈಡ್ ಅನ್ನು ಬಳಸಿಕೊಂಡು ವಿದ್ಯುತ್ ಅನ್ನು ಉತ್ಪಾದಿಸುವ ಬಗ್ಗೆ ಪರಿಶೀಲನೆ ನಡೆ–ಯುತ್ತಿದೆ. ಇದು ಅಸಾಧ್ಯವೇನಲ್ಲ ಎನ್ನುವುದು ವಿಜ್ಞಾನಿಗಳ ನಂಬಿಕೆ. ಜೊತೆಗೆ ಇದನ್ನು ಸರಿಯಾಗಿ ಬಳಸಿಕೊಂಡರೆ ಸಸ್ಯಗಳಿಗೆ ಜೀವದಾನ ಕೊಡುವಂತಹ ವಸ್ತುವೂ ಆಗಬಹುದಂತೆ. ಡೈಹೈಡ್ರೋಜನ್ ಮೊನಾಕ್ಸೈಡ್ ಹಾಕಿ ಬೆಳೆಸಿದ ಗಿಡಗಳು, ಇದಿಲ್ಲದೇ ಬೆಳೆಸಿದ ಗಿಡಗಳಿಗಿಂತಲೂ ಸಮೃದ್ಧವಾಗಿ ಬೆಳೆದು ಫಸಲು ನೀಡಿವೆ ಎಂದು ಟಿ ಐ ಎಸ್ ಎಸ್ ವರದಿ ಮಾಡಿದೆ.

ಮಣ್ಣಿನ ಆಳದಲ್ಲಿರುವ ಡೈಹೈಡ್ರೋಜನ್ ಮೊನಾಕ್ಸೈಡ್ ತಾಳೆ ಮರದಂತಹ ಎತ್ತರವಾದ ಸಸ್ಯಗಳ ಎಲೆಗಳಿಂದಲೂ ಹೊರಸೂಸುತ್ತವೆ ಎನ್ನುವುದು ತುಸು ಗಂಭೀರವಾಗಿ ಗಮನಿಸಬೇಕಾದ ವಿಷಯ. ಹಾಗೆಯೇ ಕೆಲವು ಮನೆ ವಸ್ತುಗಳು ಗಾಳಿಯಲ್ಲಿರುವ ಡೈಹೈಡ್ರೋಜನ್ ಮೊನಾಕ್ಸೈಡ್ ಅನ್ನು ಹೀರಿಕೊಳ್ಳಬಲ್ಲುವಂತೆ. ಇಂತಹ ಪದಾರ್ಥಗಳಲ್ಲಿ ಕೆಲವು ನಮ್ಮ ಆಹಾರ ಕೂಡ ಎನ್ನುವುದು ವಿಚಿತ್ರವಾದರೂ ಸತ್ಯ. ಹಾಗಿದ್ದರೆ ಡೈಹೈಡ್ರೋಜನ್ ಮೊನಾಕ್ಸೈಡ್ ನ ಬಗ್ಗೆ ನಾಗರಿಕರು ಏನು ಮಾಡಬೇಕು ಗೊತ್ತಿಲ್ಲ ಎನ್ನುತ್ತಾರೆ ವಿಜ್ಞಾನಿಗಳು ನಮ್ಮ ಚಟುವಟಿಕೆಗಳಲ್ಲಿ ಹಾಗೂ ಪರಿಸರದಲ್ಲಿ ಇಷ್ಟೊಂದು ಹಾಸುಹೊಕ್ಕಾಗಿರುವ ವಸ್ತುವನ್ನು ಗುರುತಿಸುವುದು ಕಷ್ಟವೇನಲ್ಲ. ಆದರೆ ನಿವಾರಿಸುವುದು ಕಷ್ಟವಂತೆ.




****

ಇಲ್ಲಿಯವರೆಗೂ ನೀವು ಓದಿದ್ದು ಹೊಸ ಶೋಧದ ಕಥೆ. ಅಂದ ಹಾಗೆ ನಾಳೆ ಏಪ್ರಿಲ್ 1 ಎಂದು ನಿಮಗೆ ನೆನಪಿಸುವುದು ಮರೆತಿದ್ದೆ. ಇದು ಏಪ್ರಿಲ್ 1 ರ ಸುದ್ದಿ. ಹಾಗಂತ ಇಲ್ಲಿ ಇರುವುದು ಯಾವುದೂ ನಿಮ್ಮನ್ನು ಮೂರ್ಖರನ್ನಾಗಿ ಮಾಡುವುದಕ್ಕಲ್ಲ. ಇಲ್ಲಿರುವ ಪ್ರತಿಯೊಂದು ವಾಕ್ಯವೂ ಸತ್ಯವೇ. ಆದರೆ ನೀವು ತಿಳಿಯಬೇಕಾಗಿರುವುದು ಒಂದೇ ಒಂದು. ಡೈಹೈಡ್ರೋಜನ್ ಮೊನಾಕ್ಸೈಡ್ ಎಂದರೆ ಏನು ಎಂದು? ಇದು ಇನ್ನೇನಲ್ಲ ನೀರು ಅಥವಾ H2O. ಎರಡು ಹೈಡ್ರೋಜನ್ ಅಣುಗಳು ಹಾಗೂ ಒಂದು ಆಕ್ಸಿಜನ್ ಅಣು ಕೂಡಿ ಆದ ನೀರಿನ ಅಣು. ಇದನ್ನೇ ರಸಾಯನ ವಿಜ್ಞಾನಿಗಳ ಭಾಷೆಯಲ್ಲಿ ಹೇಳುತ್ತಾ ಹೋದರೆ ಹೀಗೆ ಅದ್ವಾನ ಆಗಬಹುದು.

ಡೈಹೈಡ್ರೋಜನ್ ಮೊನಾಕ್ಸೈಡ್ ನ ಬಗ್ಗೆ ತಿಳಿದ ಮೇಲೆ ವಿಜ್ಞಾನ ಕಠಿಣ ಎನ್ನಿಸುವುದು ಏಕೆ ಎಂಬುದು ಗೊತ್ತಾಗಿರಬೇಕಲ್ಲಾ? ಹೆಸರಿನಲ್ಲಿ ಏನಿದೆ? ನೀರನ್ನೇ ಡೈಹೈಡ್ರೋಜನ್ ಮೊನಾಕ್ಸೈಡ್ ಎಂದು ಹೆಸರಿಸಿರಬೇಕಾದರೆ, ಬೇರೆ ಹೆಸರುಗಳು ಇನ್ನೆಷ್ಟು ಕೆಟ್ಟದಾಗಿರಬೇಕು ಅಲ್ಲವೇ? ಈ ವಿಜ್ಞಾನಿಗಳಿಗೆ ಹೊಸ ಹೆಸರುಗಳನ್ನು ಹುಡುಕುವುದು ಬಿಟ್ಟು ಬೇರೆ ಕೆಲಸ ಇಲ್ಲವೇನೋ ಎಂದು ಗೊಣಗಿದಿರಾ?

*ದಿ ಜರ್ನಲ್ ಆಫ್ ಇಂಪ್ಯಾಕ್ಟ್ ಆಫ್ ಸೈನ್ಸ್ ಆನ್ ಸೊಸೈಟಿ, 1960ರ ದಶಕದಲ್ಲಿ ಪ್ರಕಟಿಸಿದ್ದ ದಿ ಸೈನ್ಸ್ ಆಫ್ ಹ್ಯೂಮರ್ ಅಂಡ್ ಹ್ಯೂಮರ್ ಇನ್ ಸೈನ್ಸ್ ಎಂಬ ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ಲೇಖನವೊಂದನ್ನು ಅನುಸರಿಸಿ ಸೃಷ್ಟಿಸಿದ್ದು. ಮರುಸೃಷ್ಟಿ: ಕೊಳ್ಳೇಗಾಲ ಶರ್ಮ, ಇದರ ಧ್ವನಿರೂಪ ಜಾಣಸುದ್ದಿ ಧ್ವನಿಪತ್ರಿಕೆಯಲ್ಲಿ ಪ್ರಕಟವಾಗಿತ್ತು.*

# ದ್ಯಾವರಕಣ್ಣು

## ಆಗಸದಾಗಿನ ಬಣ್ಣದ ಕಣ್ಣು



ಖರೇನ ಹೇಳಿದ್ರಿ ನೋಡ್ರಿ. ದೊಡ್ಡ ಕಣ್ಣಿನಾಂಗ ಐತಲ್ರೀ. ಹುಬ್ಬು ಒಂದ ಇಲ್ಲಾ ಅನ್ನುದ ಬಿಟ್ರೆ ಥೇಟ ಬಣ್ಣದ ಕಣ್ಣಿನಾಂಗ ಐತಿ ನೋಡ್ರಿ? ಇದೇನು ಅಂತ ನಿಮಗ ಆಶ್ಚರ್ಯ ಆಗಿರಬೇಕಲ್ರೀ? ಇದಕ್ಕ ಶಿವನ ಕಣ್ಣು ಅಂತ ಕರಿತಾರ. ಇದು ಆಕಾಶದಾಗ ಐತಂತ್ರೀ.

ಅಂದಂಗ ದೇವರ ಕಣ್ಣ ಸಹಿತ ಇಷ್ಟು ದೊಡ್ಡದು ಐತೋ ಇಲ್ಲೋ. ಈ ಚಿತ್ರದ ನಡುವ ಒಂದು ಬಿಳೀ ಚಿಕ್ಕಿ ಕಾಣತೈತಲ್ಲ, ಅದು ಎಷ್ಟು ಸಣ್ಣದು ಗೊತ್ತೇನ್ರೀ? ಅದರಾಗ ನಮ್ಮ ಸೂರ್ಯ, ಚಂದ್ರ, ಭೂಮಿ ಅಷ್ಟ ಅಲ್ಲದೇ ಎಲ್ಲ ಗ್ರಹಗಳನ್ನೂ ಒಂದಕಡೆ “ಇಡುವಷ್ಟು ಸಣ್ಣದು. ಇನ್ನು ಅದರ ಸುತ್ತ ಇರೋ ಆ ಬಣ್ಣದ ಕಣ್ಣು ಇನ್ನೆಷ್ಟು ದೊಡ್ಡದ ಐತೋ ಏನೋ?

ಇದನ್ನ ಇಂಗ್ಲೀಷಿನ್ಯಾಗ ಹೀಲಿಕ್ಸ್ ನೆಬ್ಯುಲಾ ಅಂತ ಕರೀತಾರ. ನೆಬ್ಯುಲಾ ಅಂದ್ರ ನಕ್ಷತ್ರಗಳು ಹುಟ್ಟೋ, ಸಾಯೋ ಜಾಗ. ರಾತ್ರಿ ಆಕಾಶದಾಗ ಮೀನ ರಾಶಿ ನಕ್ಷತ್ರಗಳು ಇರೋ ದಿಕ್ಕಿನ್ಯಾಗ ಏಳು ನೂರು ಜ್ಯೋತಿರ್ವರ್ಷಗಳಷ್ಟು ದೂರದಾಗ ಇದು ಐತಿ.

ಜ್ಯೋತಿರ್ವರ್ಷ ಅಂದರ ಗೊತ್ತ ಐತಲ್ಲ? ಒಂದು ವರ್ಷದಾಗ ಬೆಳಕು ಸಾಗೋ ಒಟ್ಟು ದೂರ ನೋಡ್ರಿ. ನಮ್ಮ ಲೆಕ್ಕದಾಗ ಹೇಳಬೇಕಂದ್ರ ಅಂದಾಜು ಒಂಭತ್ತು ಕೋಟಿ ನಲವತ್ತಾರು ಲಕ್ಷದ ಎಂಟುಸಾವಿರ ಕಿಲೋಮೀಟರು ದೂರ ಅಂದಂಗ ಆತು. ಅಂ–ದರ ಈ ಹೀಲಿಕ್ಸ್ ನೆಬ್ಯುಲಾ ಆರು ಸಾವಿರದ ಮುನ್ನೂರು ಕೋಟಿ ಕಿಲೋಮೀಟರಿಗಿಂತಲೂ ದೂರದಾಗ ಐತಿ ಅಂದಂಗ ಆತು. ಇದೆಷ್ಟ ದೊಡ್ಡದು ಅಂದರ, ಇದರ ಒಂದು ಅಂಚಿಂದ ಇನ್ನೊಂದು ಅಂಚಿಗೆ ಜಾರಿದರ ಕಡಿಮೆ ಅಂದರೂ ಮೂವತ್ತು ಕೋಟಿ ಕಿಲೋಮೀಟರು ಅಗಲ ಐತಿ.

ಇದರ ನಡುವ ಇರೋ ಬೆಳ್ಳಿ ಚಿಕ್ಕಿ ಒಂದು ನಕ್ಷತ್ರ. ಅದು ಸಾಯೋವಾಗ ಅದರಿಂದ ಆಕಡೆ ಈಕಡೆ ಸಿಡಿದಂತಾ ಅನಿಲಗಳು ಆ ಬಣ್ಣದಾಗ ಅದಾವ ಅಂತ. ಅದರಾಗ ಹೈಡ್ರೋಜನ್ನ ಮತ್ತು ಆಕ್ಸಿಜನ್ನು ಮಾತ್ರ ಅದಾವ.

ಮೊದಲ ಈ ಆಕಾಶದ ಕಡಿ ಟೆಲಿಸ್ಕೋಪು ಇಟ್ಟು, ಹೈಡ್ರೋಜನಿಂದ ಬರುವ ಬಣ್ಣಾನ ಮತ್ತ ಆಕ್ಸಿಜನ್ನಿನಿಂದ ಬರೋ ಬಣ್ಣಾನ ಬ್ಯಾರೆ, ಬ್ಯಾರೆ ಮಾಡಿ ಚಿತ್ರ ತಗದಾರ. ಈ ಚಿತ್ರಕ್ಕ ಒಟ್ಟು ಐದು ಗಂಟಿ ವ್ಯಾಳ ಕಾಯಬೇಕಾತಂತ. ಆ ಮ್ಯಾಲ ಅವನ್ನೆಲ್ಲ ಒಂದ ಕಡೆ ಕೂಡಿಸಿದ ಮ್ಯಾಲ ಹೀಂಗ ಕಣ್ಣಿನಂಗ ಕಂಡೈತಿ. ಅದಕ್ಕ ಇದನ್ನ “ದಿ ಐ ಆಫ್ ಗಾಡ್” ಅಂತ ಕರೆದಾರ.

**ಚಿತ್ರ ತೆಗೆದವರು: ಪ್ರಭು ಎಸ್ ಕುಟ್ಟಿ**
**https://www.instagram.com/p/CZJtHzfMaEr/**



ಮಗನಿಗೆ ಕನ್ಯಾನ್ವೇಷಣೆಗೆ ಬಂದ ಶ್ರೀ ತ್ರಿಪಾಠಿಗೆ ಸಿಕ್ಕದ್ದು ಎಂತಹ ರೋಬೋ ಸೊಸೆ?

# ಕನ್ಯಾನ್ವೇಷಣೆ

ಶ್ವೇತಾ ತನೇಜಾ

ಮಂಗಗಳು ಆಗಷ್ಟೇ ದಾಳಿ ಮಾಡಿದ್ದುವು. ಭಾಯಿಸಾಬ್ ಗಾಂಧಿ ರಸ್ತೆಯಲ್ಲಿರುವ ತನ್ನ ಅಂಗಡಿಯ ಡಿಸ್ಪ್ಲೇ ಕಿಟಕಿಯತ್ತ ಕಣ್ಣು ಹಾಯಿಸಿದ. ದಾರಿಯಲ್ಲಿ ಬಿದ್ದಿದ್ದ ಮಾವಿನ ಸಿಪ್ಪೆಗಳಿಂದ ದೂರ ಸರಿಯುತ್ತಾ, ಆ ದರಿದ್ರ ಮಂಗಗಳನ್ನು ಶಪಿಸಿದ. ಕಿಟಕಿಯಲ್ಲಿ ಪ್ರತಿಫಲಿಸಿದ ನೆರಳು ಮಬ್ಬಾಯಿತು. ತಲೆಯೆತ್ತಿ ನೋಡಿದ ಭಾಯಿಸಾಬನ ಗಂಟಿಕ್ಕಿದ ಮುಖ ಕ್ಷಣಾರ್ಧದಲ್ಲಿ ಬೆಸ್ಟ್ ಸೇಲ್ಸ್‌ಮ್ಯಾನ್ ಸ್ಮೈಲ್‌ಗೆ ಬದಲಾಗಿತ್ತು.

ಮೂವರ ಕುಟುಂಬ ಅಲ್ಲಿತ್ತು. ಬೋಳುತಲೆಯ ನಡು ಮಧ್ಯದಿಂದ ಜೋತಾಡಿದ ಒಂದು ಪುಳಿಜುಟ್ಟು ಬಿಟ್ಟ ಬ್ರಾಹ್ಮಣ ಗಂಡ. ಮೂಗಿನ ಮೇಲೆ ಜಾರಿ ಬಿದ್ದಿದ್ದ ಕನ್ನಡಕ. ಶಿಸ್ತಾಗಿ ಇಸ್ತ್ರಿ ಮಾಡಿದ ಶರಟು ಮತ್ತು ಧೋತಿಯನ್ನು ಧರಿಸಿದ್ದ. ಮಡದಿಯೋ ಹಳೆಯ ಕಾಲದ ದೇಸಿಬಾಟ್ಸ್™ ನಂತೆ ಅಪ್ಪಟ ಹತ್ತಿಬಟ್ಟೆಯ ಸೀರೆ ಉಟ್ಟಿದ್ದಳು. ಮತ್ತು ಅವನ ಹದಿಹರೆಯದ ಮಗ – ಸುಮಾರು ಹತ್ತೊಂಬತ್ತು ವಯಸ್ಸಿರಬಹುದು – ತೆಳ್ಳಗೆ, ಚಿಗುರುಮೀಸೆ ಹೊತ್ತು ಗೊಂದಲಗೊಂಡಂತಿದ್ದ. ಮದುವೆಯ ವಯಸ್ಸಿನವ ಎನ್ನಿ.

ಭಾಯಿಸಾಬ್ ಖುಷಿಯಾದ.

"ಬನ್ನಿ. ಬನ್ನಿ. ಸುಸ್ವಾಗತ," ಎಂದು ಹೇಳುತ್ತಲೇ ಕೈಯಲ್ಲಿದ್ದ ಒರೆಸುವ ಬಟ್ಟೆಯನ್ನು ಮಿಂಚಿನ ವೇಗದಲ್ಲಿ ಬದಿಗಿಟ್ಟ. ಆ ಅಂಟಂಟು ಕೈಗಳನ್ನೇ ಜೋಡಿಸಿ ನಮಸ್ತೆ, "ಬೆಸ್ಪೋಕ್ ಬ್ರೈಡ್‌ಗೆ ಸ್ವಾಗತ. ನಮ್ಮ ಪುಟ್ಟ ಅಂಗಡಿಯಲ್ಲಿ ನಿಮಗೆ ಏನು ಬೇಕು?"ಎಂದ.

"ನನ್ನ ಹೆಸರು ತ್ರಿಪಾಠಿ," "ಇವರು ನನ್ನ ಹೆಂಡತಿ ಮತ್ತು ಮಗ". ನಿಮ್ಮ ಸ್ನೇಹಿತ ಶ್ರೀ ಮೆಹ್ರೋತ್ರಾ ನಮ್ಮನ್ನು ಇಲ್ಲಿಗೆ ಕಳುಹಿಸಿದರು" ಆ ವ್ಯಕ್ತಿ ಹೇಳಿದರು.

ನಡುವೆ ಬಾಯಿ ಹಾಕಿದ ಮಹಿಳೆ ಡಿಸ್‌ಪ್ಲೇ ವಿಂಡೋದ ದಿಕ್ಕಿನತ್ತ ನೋಡುತ್ತಾ "ನಮಗೊಂದು ವಧು ಬೇಕಿತ್ತು" ಅಂದಳು. ಕಿಟಕಿಯಲ್ಲಿ ದೇಸಿಬಾಟ್ಸ್" ಎರಡು ಹೊಸ ಮಾಡೆಲ್‌ಗಳು ಮದುವೆಯ ದಿರಿಸಿನಲ್ಲಿ ಪೋಸ್ ನೀಡಿದ್ದವು.

"ರಿಯಲ್ಲೂಡ್ ™ ಪವಿತ್ರಾನಿಕ್ ಮೆದುಳಿರುವ ಮೊದಲ ತಲೆಮಾರಿನ ದೇಸಿಬಾಟ್?! ಭಾಯಿಸಾಬ್‌ಗೆ ತಡೆಯಲಾಗಲಿಲ್ಲ. ಮೊದಲ ತಲೆಮಾರಿನ ಬಾಟ್‌ಗಳೇ ಅಪರೂಪ. ಅದರಲ್ಲಿಯೂ ರಿಯಲ್ಲೂಡ್ ™ ಪವಿತ್ರಾನಿಕ್ ಮೆದುಳಿರುವ ಹಾಗೂ ಕೆಲಸ ಮಾಡುತ್ತಿರುವುದನ್ನು ನೋಡುವುದು ಪವಾಡವೇ ಸರಿ. ತನ್ನ ಇಪ್ಪತ್ತು ವರ್ಷಗಳ ಅನುಭವದಲ್ಲಿ, ಭಾಯಿಸಾಬ್ ಇನ್ನೂ ಒಂದನ್ನು

ಕಲ್ಪನೆ ಕಥೆ

ನೋಡಿರಲಿಲ್ಲ. ಇದೇ ಮೊದಲು.

"ಅದು ಹಳೆಯ ಮಾಡೆಲ್, "ಎಂದರು ತ್ರಿಪಾಠಿ.

ಭಾಯಿಸಾಬ್ ಕಸಿವಿಸಿಯಿಂದ "ಓಹ್, ಹಳೆಯದೆಲ್ಲ ಚಿನ್ನ, ಚಿನ್ನದಂತೆ. ತಪ್ಪು ತಿಳಿಯಬೇಡಿ. ಇಷ್ಟು ಒಳ್ಳೆಯ ಮೊದಲ ತಲೆಮಾರಿನ ಹೆಣ್ಣು ದೇಸಿಬಾಟ್ಸ್‌ಗಳು ಸಿಗುವುದು ಅಪರೂಪ, ಅದೃಷ್ಟ," ಎಂದು ತನ್ನ ದಪ್ಪ ತುಟಿಗಳನ್ನು ಚಪ್ಪರಿಸುತ್ತಾ ಹೇಳಿದ. ತ್ರಿಪಾಠಿಯವರ ಭುಜವನ್ನು ಹಿಡಿದುಕೊಂಡು, ಅಂಗಡಿಯೊಳಗೆ ಕರೆದೊಯ್ದ.

"ಮೆಹ್ರೋತ್ರಾರ ಸೋದರ ಎಂದರೆ ನನಗೂ ಸೋದರನೇ. ಅಣ್ಣಾ. ನಿಮಗೆ ಏನು ಬೇಕೋ ಕೊಡುವ ಸೌಭಾಗ್ಯ ನನ್ನದಾಗಲಿ"

ತಾಯಿ ಮತ್ತು ಮಗ ಹಿಂದೆಯೇ ಬಂದರು. ಭಾಯಿಸಾಬ್ ಅವರೆಲ್ಲರನ್ನೂ ಹಜಾರದ ಮೂಲಕ ಮುನ್ನಡೆಸಿದ, ಎರಡೂ ಬದಿಗಳಲ್ಲಿ ಎತ್ತರಕ್ಕೆ ಗಾಜಿನ ಪಾಡ್ ಗಳಿದ್ದುವು.

"ನೀವು ತಪ್ಪು ತಿಳಿಯದಿದ್ದರೆ, ಒಂದು ಪ್ರಶ್ನೆ. ಮದುವೆಯಾಗಿ ಎಷ್ಟು



ದಿನವಾಯಿತು ಸಾರ್" ಎಂದು ತಂದೆಯನ್ನು ಕೇಳಿದ,

"ನಲವತ್ತನಾಲ್ಕು ವರ್ಷಗಳು, "ಎಂದರು ತ್ರಿಪಾಠಿ

ಭಾಯಿಸಾಬ್ ಗುಟ್ಟಾಗಿ ಮತ್ತೆ ದೇಸಿಬಾಟ್ ಕಡೆಗೆ ಕಣ್ಣು ಹಾಯಿಸಿದ. ರಿಯಲ್ಮೂಡ್ ™ ಪವಿತ್ರಾನಿಕ್ ಮೆದುಳನ್ನು ಹೊಂದಿರುವ ಮೊದಲ ಪೀಳಿಗೆ. ಎಂತಹ ಅಪರೂಪದ ಸೌಂದರ್ಯ. ರಿಯಲ್ಮೂಡ್ ™ಎಂಬುದು ದೇಸಿಬಾಟ್ಸ್‌ನ ವಿಜ್ಞಾನಿಗಳ ತಂಡವೊಂದು ಮಾಡಿದ ಪ್ರಯೋಗ, ಸಂತಾನೋತ್ಪತ್ತಿ ಮಾಡಬಲ್ಲ ರೋಬೋಟ್‌ಗಳಿಗಾಗಿ ರಚಿಸಲಾದ ಪವಿತ್ರಾನಿಕ್ ಮಿದುಳುಗಳಿಗೆ ನಿಜವಾದ, ಮಾನವನಂತಹುದೇ ಗುಣಗಳನ್ನು ನೀಡಲು ಪ್ರಯತ್ನಿಸಿದ್ದರು. ಮಾನವ ಹೆಣ್ಣು ಮೆದುಳನ್ನು ಅನುಕರಿಸುವಂತಹ, ಭಾವನೆಗಳು ತುಂಬಿದ, ವಾಗ್ವಾದ ಮಾಡುವ, ಚಂಚಲ ಮನಸ್ಥಿತಿಯ, ಜಟಿಲವಾದ ಪದರಗಳನ್ನು ಸೇರಿಸಿದ್ದರು. ಭಾರತೀಯ ಮನೆಗಳಲ್ಲಿ ಈ ರೋಬೋಟ್‌ಗಳು ಒಗ್ಗುವುದಿಲ್ಲ ಎಂದು ಅರಿವಾಗುವುದಕ್ಕೆ ಮೊದಲೇ ದೇಸಿಬಾಟ್ಸ್ ಅಂತಹ 1000 ಬಾಟ್‌ಗಳನ್ನು ಮಾರಾಟ ಮಾಡಿಬಿಟ್ಟಿತ್ತು, ಏಕೆಂದರೆ ಈ ಬಾಟ್‌ಗಳು ವೈವಾಹಿಕ ಬದುಕನ್ನೂ, ಅಡುಗೆ ಮಾಡೆವೆಂದೂ ನಿರಾಕರಿಸಿದ್ದವು. ಇವನ್ನು ದುರಹಂಕಾರಿ ಹಾಗೂ ಕೆಟ್ಟವೆಂದು ಗ್ರಾಹಕರು ಪರಿಗಣಿಸಿದ್ದರಿಂದ, ಕಂಪನಿಯು ತಕ್ಷಣವೇ ಎಲ್ಲ ಬಾಟುಗಳನ್ನೂ ಹಿಂಪಡೆದಿತ್ತು. ಮೊದಲ ತಲೆಮಾರಿನ ಹೆಚ್ಚಿನದನ್ನು ಬದಲಾಯಿಸಿತ್ತು.

ಆದರೆ ಎಲ್ಲವನ್ನೂ ಬದಲಾಯಿಸಲಿಲ್ಲ ಎನ್ನುವುದು ಸ್ಪಷ್ಟ. ಭಾಯಿಸಾಬ್‌ಗೆ ಇದೊಂದು ಅದ್ಭುತ ಅವಕಾಶ ಎನ್ನಿಸಿತು. ಮತ್ತೊಮ್ಮೆ ಗೋಣು ತಿರುಗಿಸಿ ಅವಳನ್ನು ನೋಡಿದರು.

"ಅದ್ಭುತ, ಅದ್ಭುತ. ಎಂತಹ ಸುಂದರ ಮೈಕಟ್ಟು" ಎಂದು ಸೀರೆಯ ಪಲ್ಲು ಸರಿಪಡಿಸುತ್ತಿದ್ದ ಅವಳ ಬೆರಳ ತುದಿಗಳನ್ನೇ ನೋಡುತ್ತಾ ಹೇಳಿದರು. ನಿಯತವಾಗಿ ಕಾಳಜಿ ವಹಿಸಿದ್ದರಿಂದ ಮೊದಲ ತಲೆಮಾರಿನ ದೇಸಿಬಾಟ್‌ಗಳ ಚರ್ಮ ಗಟ್ಟಿಯಾಗಿದ್ದರೂ, ಒಡೆದಿರಲಿಲ್ಲ.

"ಚೆನ್ನಾಗಿರುವುದನ್ನು ಮಾತ್ರ ತೋರಿಸಿ " ಎಂದರು ಶ್ರೀಮತಿ ತ್ರಿಪಾಠಿ. ತ್ರಿಪಾಠಿ ಬಲವಾಗಿ ಗೋಣು ಹಾಕಿದರು.

"ಖಂಡಿತ, ಮೇಡಂ, ಭಾಯಿಸಾಬ್ ಅವರ ಬೆಸ್ಪೋಕ್ ಬ್ರೈಡ್ಸ್ ಬೊಟಿಕ್‌ನಲ್ಲಿ ಉತ್ತಮ ಬಾಟ್‌ಗಳೇ ಇರೋದು," ಎಂದ ಭಾಯಿಸಾಬ್ ಹಜಾರದ ತುದಿಯಲ್ಲಿರುವ ಗುಂಡಿಯನ್ನು ನಾಟಕೀಯವಾಗಿ ಒತ್ತಿದ. ಒಂದು ಪಾಡ್ ಕಮಲದಂತೆ ತನ್ನ ಫ್ಲಾಪ್ ಗಳನ್ನು ತೆರೆಯುತ್ತಾ ಹಳಿಗಳ ಮೇಲೆ ಬಂತು.

ತ್ರಿಪಾಠಿಯವರನ್ನು ಅರ್ಥಗರ್ಭಿತವಾಗಿ ನೋಡುತ್ತಾ "ಇದು ದೇಸಿಬಾಟ್ ಆವೃತ್ತಿ 56.7, ಸುಧಾರಿತ ಬಾಟ್, "ನಿಮ್ಮದೂ ಇದೆ ಸರ" ಎಂದ. ವಧು, ಮಿನುಗುವ ಮತ್ತು ಬೆರಗುಗೊಳಿಸುವ ಚಮಕಿ ಮತ್ತು ಗ್ಲೋಪಿನ್ನಳಿಂದ ವಿನ್ಯಾಸಗೊಂಡಿದ್ದ ರೇಷ್ಮೆ ಸೀರೆಯಲ್ಲಿ ಮಿಂಚುತ್ತಿದ್ದಳು. ತ್ರಿಪಾಠಿ ಎವೆಯಿಕ್ಕದೆ ನೋಡಿದರು.

"ಆರು-ಕ್ವಾಡ್ ಮೆಮೊರಿ ಇರುವ ಪವಿತ್ರಾನಿಕ್ ಮೆದುಳು, ಎಲ್ಲಾ ಧಾರ್ಮಿಕ ಪಠ್ಯಗಳನ್ನು ಕಂಠಪಾಠ ಮಾಡಿಕೊಂಡಿದೆ, 5,000ಕ್ಕೂ ಹೆಚ್ಚಿನ ಪುರಾತನ ಅಡುಗೆಗಳನ್ನು ಮಾಡಬಲ್ಲುದು. ಸ್ವಭಾವವೂ ಆಹ್ಲಾದಕರ. ಎಲ್ಲರೊಂದಿಗೂ ಹೊಂದಿಕೊಂಡು ಹೋಗುವ ವ್ಯಕ್ತಿತ್ವವೂ ಇದೆ.".

"ಅವಳ ವಿನ್ಯಾಸದ ಬಗ್ಗೆ ಹೇಳಿ! ಎಂದು ತ್ರಿಪಾಠಿ ಕೇಳಿದರು.

"ಅದೇ ಬಾಟೇ ಸರ್, ನವೀಕರಿಸಿಲಾಗಿದೆಯಷ್ಟೇ. ಟೈಟಾನಿಯಂ, ತುಕ್ಕು-ನಿರೋಧಕ ದೇಹ, ಮಾನವ ಚರ್ಮದಂತಹ ಸ್ಪರ್ಶಕ್ಕಾಗಿ ತೆಳುವಾದ ಎಪಿಡರ್ಮಿಸ್".

"ಅವಳ ಸ್ತನಗಳು, ಗರ್ಭ ಮತ್ತು ಕಾಲುಗಳಿಗೆ ನೀವು ಯಾವುದರ ಚರ್ಮವನ್ನು ಬಳಸಿದ್ದೀರಿ? ನನ್ನ ಮಗ ಮುಟ್ಟುವ ಯಾವುದೂ ದೇಸಿ ಆಗಿರಬೇಕು,"ಎಂದು ಶ್ರೀಮತಿ ತ್ರಿಪಾಠಿ ಮಧ್ಯ ಬಾಯಿ ಹಾಕಿದರು.

"ಇದು ಹಸುವಿನ ತುಪ್ಪದಂತೆಯೇ ಶುದ್ಧ, ಮೇಡಂ," ಭಾಯಿಸಾಬ್ ಹಲ್ಲು ಕಿರಿಯುತ್ತ ಹೇಳಿದ. ಬಾಲಿವುಡ್ ತಾರೆ ಸ್ಮೈಲಿ ಖಾನ್ ಅವರ

ಪ್ರಶಸ್ತಿ–ವಿಜೇತ ನಗುವನ್ನು ನಕಲು ಮಾಡುವಂತಹ ದುಬಾರಿ ಹಲ್ಲುಗಳಿಗೆ ದುಡ್ಡು ಹಾಕಿದ್ದನಲ್ಲ!

"ಖಂಡಿತವಾಗಿಯೂ ಈ ಸೀಮಿತ ಬಜೆಟ್ನಲ್ಲಿ, ನೀವು ಎಲ್ಲ ಪದರಗಳನ್ನೂ ಪೂರ್ಣವಾಗಿ ದೇಸಿ ಎಪಿಡರ್ಮಿಸ್‌ನದ್ದೇ ಪಡೆಯಲು ಸಾಧ್ಯವಾಗುವುದಿಲ್ಲ–" ಧ್ವನಿ ತಗ್ಗಿಸಿ ಗುಟ್ಟಾಗಿ ಎನ್ನುವಂತೆ, "ನಿಮ್ಮ ಕುಟುಂಬದವರಿಗೆ ಹೆಚ್ಚಿನ ಬಜೆಟ್ಟಿನದು ಬೇಕು ಎಂದರೆ..." ಎನ್ನುತ್ತಾ ಭಾಯಿಸಾಬ್ ಮಾತನ್ನು ಅರ್ಧಕ್ಕೆ ನಿಲ್ಲಿಸಿದ.

"ಕ್ಲಿಕ್ ಮಾಡಿ, ಕ್ಲಿಕ್ ಮಾಡಿ." ಶ್ರೀಮತಿ ತ್ರಿಪಾಠಿ ತಮ್ಮ ಮುಖವನ್ನು, ಬೃಹದಾಕಾರದ ಕತ್ತನ್ನೂ ನಿಧಾನವಾಗಿ ಶ್ರೀ ತ್ರಿಪಾಠಿಯವರತ್ತ ತಿರುಗಿಸಿದರು. ಅವರ ನೋಟವು ಹೆದರಿಸುವಂತಿತ್ತು. ಶ್ರೀ ತ್ರಿಪಾಠಿಯವರ ಅಂಗಿಯ ಪಟ್ಟಿಯನ್ನು ಹಿಡಿದು ಎಳೆದು, ಜೋರಾಗಿ ಬೆರಳಿನಿಂದ ಚುಚ್ಚಿ

**ಆಶ್ಚರ್ಯ ಹಾಗೂ ಗಾಬರಿಯಿಂದ ಶ್ರೀಮತಿ ತ್ರಿಪಾಠಿಯರ ತೆರೆದ ಬಾಯಿ ಮುಚ್ಚಲಿಲ್ಲ. ಆದರೆ ಭಾಯಿಸಾಬ್ ಈ ವಿಷಯದಲ್ಲಿ ಹಾಗೆ ಮಾಡದಿರಲು ಕಾರಣವಿತ್ತು. ಅವನು ಹಲ್ಲುಕಿರಿದು ನಕ್ಕ.**

ತೋರಿಸಿದರು. ಶ್ರೀಮತಿ ತ್ರಿಪಾಠಿಯ ಒಂದು ತೋರುಬೆರಳಿನ ಉಗುರು ತುಂಡಾಗಿರುವುದನ್ನು ಭಾಯಿಸಾಬ್ ಗಮನಿಸಿದ.

"ನಮ್ಮ ರಾಜನಿಗೆ ಉತ್ತಮವಾಗಿರುವುದು ಮಾತ್ರ "ಎಂದು ಹೇಳಿ. ಶ್ರೀ ತ್ರಿಪಾಠಿ ಹೆಂಡತಿಯ ಮಾತಿಗೆ ಮೌನವಾಗಿ ಸಮ್ಮತಿಸುತ್ತಾ, ಗೋಣು ಹಾಕಿದರು. ಹೀಗೆ ಹಠಾತ್ತಾಗಿ ತನ್ನ ಮೇಲೆ ಬಂದ ಗಮನಕ್ಕೆ ಮಗ ನಲುಗಿದ. ಭಾಯಿಸಾಬ್ ತ್ವರಿತವಾಗಿ ಆವೃತ್ತಿ 56.7 ಅನ್ನು ಅದರ ಜಾಗಕ್ಕೆ ಹಿಂತಿರುಗಿಸಿ, ಕಳೆದ ಕೆಲವು ವರ್ಷಗಳಲ್ಲಿ ಬಂದಿದ್ದ ದೇಸಿಬಾಟ್ಸ್? ಗಳ ವಿವಿಧ ಆವೃತ್ತಿಗಳನ್ನು ನಿರ್ಲಕ್ಷಿಸಿ ಶ್ರೀ ತ್ರಿಪಾಠಿ ಕುಟುಂಬವನ್ನು ತನ್ನ ಅಂಗಡಿಯೊಳಗೆ ಮುನ್ನಡೆದ. ಕೊನೆಯಲ್ಲಿದ್ದ ಪಾಡ್ನ ಮುಂದೆ ನಿಂತು, ತ್ರಿಪಾಠಿ ಕುಂಟುಂಬವು ಅವನ ಹತ್ತಿರ ಬರುವುದನ್ನು ಕಾಯುತ್ತಿದ್ದನು.

"ನಾನು ನಿಮಗೆ ಹೊಸದಾದ ಸಂಸ್ಕಾರಿ ಸೊಸೆ ವರ್ಶನ್ 2.4 ಅನ್ನು ಪರಿಚಯಿಸುತ್ತೇನೆ, "ಎಂದು ಭಾಯಿಸಾಬ್ ತನ್ನ ಕೈಗಳನ್ನು ಜಾದೂಗಾರನಂತೆ ಅರಳಿಸುತ್ತಾ ಮಾತು ಆರಂಭಿಸಿದ. "ಇವರು DesiBots? ನಿಂದ ಸೃಷ್ಟಿಯಾಗಿರುವ ಅತ್ಯಂತ ಶುದ್ಧವಾದ, ಉನ್ನತ ಶ್ರೇಣಿಯ ಹೆಣ್ಣು." ಎಂದವನೇ ಪಾಡ್ನ ಪಕ್ಕದಲ್ಲಿ ಒಂದು ಗುಂಡಿಯನ್ನು ಒತ್ತಿದ. ವೇದಿಕೆಯೊಂದು ಕಮಲದ ಆಕಾರದ ಪಾಡ್ನೊಂದಿಗೆ ನಯವಾಗಿ ಮೇಲೆ ಬಂದು, ಸೂಕ್ಷ್ಮವಾಗಿ ತೆರೆದುಕೊಂಡು, ಪೀಠದ ಮೇಲೆ ನಿಂತಿರುವ ಬೋಟ್ ಅನ್ನು ಪ್ರದರ್ಶಿಸಿತು. ಅವಳು ಮನೋಹರವಾಗಿ ಕಸೂತಿ ಮಾಡಿದ ಸೀರೆಯುಟ್ಟಿದ್ದಳು, ಸೀರೆಯು ದೇಹದ ಎಲ್ಲಾ ಉಬ್ಬುತಗ್ಗುಗಳನ್ನು ಸ್ಪಷ್ಟವಾಗಿ ಪ್ರದರ್ಶಿಸುತ್ತಿತ್ತು. ಅವಳ ತೆಳು ಸ್ಟ್ರಾಪ್ ರವಿಕೆಯಲ್ಲಿದ್ದ ಸೀಳು ಮತ್ತು ತುಸು ಹೆಚ್ಚಾಗಿಯೇ ಬಾಗಿದ್ದ ಸೊಂಟದ ಕಡೆಗೆ ಮಗನ ಕಣ್ಣುಗಳು ಹಾರಿದವು.

"ಡಿಸೈನರ್ ವರ್ಜಿನ್ ಮೇಡಂ" ಎಂದ ಭಾಯಿಸಾಬ್. "ಅಷ್ಟೇ ಅಲ್ಲ. ಅವಳ ಸುಂದರ ದೇಹದಲ್ಲಿ ಅಗ್ಗದ ಟೈಟಾನಿಯಂ ಇಲ್ಲ. ಚೀನಾದ ಯಾವ ವಸ್ತುವನ್ನೂ ಬಳಸಿಲ್ಲ. ಜರ್ಮನಿಯಿಂದ ಆಮದು ಮಾಡಿದ ಕೆಲವು ಚಿಪ್‌ಗಳಿವೆ. ಆದರೆ ಯಾವುದನ್ನೂ ಮುಟ್ಟಲಾಗುವುದಿಲ್ಲ ಅಥವಾ ನೋಡಲಾಗುವುದಿಲ್ಲ. ದೇಸಿ ಚರ್ಮವನ್ನು ಬಳಸಿ ಅವಳ ದೇಹದ ಎಪಿಡರ್ಮಿಸ್ ಅನ್ನು ರಚಿಸಲಾಗಿದೆ. ಮುಖ ಮತ್ತು ಗರ್ಭಾಶಯ ಮಾತ್ರವಲ್ಲ ಮೇಡಂ, ಸಂಪೂರ್ಣ ದೇಹದ ಚರ್ಮ. ದೇಸಿ ಹಸುವಿನ ಗೋಮೂತ್ರದಲ್ಲಿ ಎರಡು ತಿಂಗಳವರೆಗೆ ಚರ್ಮವನ್ನು ನೆನೆಸಿ ಎಲ್ಲಾ ಲೋಹೀಯ ಕಲ್ಮಶಗಳನ್ನು ತೊಳೆಯಲಾಗಿದೆ. ಅವಳು ನಿಮ್ಮ ಮನೆ ಬೆಳಗುವ ಸೊಸೆ ಮೇಡಂ, ನಿಮ್ಮ ಜೀವನವನ್ನು ಬೆಳಗಿಸುತ್ತಾಳೆ.

"ನನಗೆ ಗೊತ್ತಿಲ್ಲದ್ದಾ?" ಎಂದು ಶ್ರೀಮತಿ ತ್ರಿಪಾಠಿ ವ್ಯಂಗ್ಯವಾಗಿ ಉತ್ತರಿಸಿದರು. ಆ ಸಮಯದಲ್ಲಿ ಯಾರೋ ಅವರ ಮುಖದ ಮೇಲೆ ಗರಗಸವನ್ನು ಆಡುತ್ತಿರುವಂತೆ ಮೂಗು, ಕೆನ್ನೆಗಳು ಮತ್ತು ತುಟಿಗಳು ಚಲಿಸಿದವು.

ಭಾಯಿಸಾಬ್, ಶ್ರೀ ತ್ರಿಪಾಠಿಯ ಕಡೆ ತಿರುಗಿ, "ಅಷ್ಟೇ ಅಲ್ಲ ಸರ್ ಅವಳ ಗರ್ಭಕ್ಕೆ ಉತ್ತಮ ಗುಣಮಟ್ಟದ ಡಿಎನ್ಎ ಬಳಸಲಾಗಿದೆ, ಇಂದು ನಿಮಗೆ ಸಿಗಬಹುದಾದ ಅತ್ಯುತ್ತಮ ಗುಣಮಟ್ಟದ ಅಂಡಾಶಯವನ್ನು ರಚಿಸುವಂತೆ ಇವಳನ್ನು ಸೃಷ್ಟಿಸಲಾಗಿದೆ" ಎನ್ನುತ್ತಾ ತನ್ನ ಬೆರಳುಗಳಿಗೆ ಮುತ್ತಿಟ್ಟನು. "ಉನ್ನತ ಜಾತಿ ಗುಣಗಳನ್ನು ಸೇರಿಸಿದ ನಿಮ್ಮ ಭವಿಷ್ಯದ ಸಂತತಿಯನ್ನು ಹೂಡಿಕೆ ಮಾಡಲು."

"ಯಾವ ಮಟ್ಟದ ಜಾತಿ?" ಶ್ರೀ ತ್ರಿಪಾಠಿ ಕೇಳಿದರು.

"ಬ್ರಹ್ಮ 238."

ತಂದೆ ಏದುಸಿರು ಬಿಟ್ಟರು. ಅವರು ಉನ್ನತ ಜಾತಿಯವರಾಗಿದ್ದು,



ತಂದೆ ಮತ್ತು ಮಗ ಇಬ್ಬರೂ ಪವಿತ್ರ ದಾರವನ್ನು ಧರಿಸಿದ್ದರೂ, ಈ ಸಂಖ್ಯೆಯು ಅವರ ಸಾಮಾಜಿಕ ಸ್ಥಾನಮಾನಕ್ಕಿಂತ ಹೆಚ್ಚಿನದಾಗಿದೆ ಎನ್ನುವುದನ್ನು ಭಾಯಿಸಾಬ್ ಗಮನಿಸಿದ. ಬಿಸಿಯಾದ ರೊಟ್ಟಿಯ ಮೇಲೆ ಬೆಣ್ಣೆಯು ಹರಡಿಕೊಳ್ಳುವಂತೆ ಅವನ ಮುಖದ ತುಂಬೆಲ್ಲಾ ಅವನ ತುಟಿಗಳು ಬಿರಿದವು.

"ಉನ್ನತ ಜಾತಿ, ಸಾರ್ ಮತ್ತಷ್ಟೇ ಅಲ್ಲ," ಎಂದು ಮತ್ತೆ ತಂದೆಯನ್ನು ಉದ್ದೇಶಿಸಿ ಹೀಗೆ ಹೇಳಿದ. "ದೇಸಿಬಾಟ್ಸ್‌ನಲ್ಲಿನ ಜೀನಿಯಸ್ ತಂಡವು ಆಕೆಯ ಪವಿತ್ರಾನಿಕ್ ಮೆದುಳಿನಲ್ಲಿ ಸಂಸ್ಕಾರಚಿಪ್ ಇರಿಸಿದೆ. ಈ ಚಿಪ್ ನಿಂದ ಮನೆಯಲ್ಲಿ ನೀವು ಶುದ್ದವಾದ ಸಂಸ್ಕಾರದ ಅನುಭವ ಸಿಗುವುದು ಗ್ಯಾರಂಟಿ, ಸರ್.

"ನಾವು ಇಲ್ಲಿ ಯಾವ ರೀತಿಯ ಸಂಸ್ಕೃತಿಯ ಬಗ್ಗೆ ಮಾತನಾಡುತ್ತಿದ್ದೇವೆ? ಎಂದು ತಾಯಿ ಕೇಳಿದರು.

"ಸಂಸ್ಕಾರಿಸೊಸೆ ಈಗಾಗಲೇ ಎಲ್ಲಾ ಪ್ರಾಚೀನ ಪಠ್ಯಗಳಿಂದ ಅಪ್ಡೇಟ್ ಆಗಿದ್ದಾಳೆ." ಅವನು ತನ್ನ ಬೆರಳುಗಳನ್ನು ಎಣಿಸುತ್ತಾ ಹೇಳಿದ "ನಮ್ಮ ನೆಲದ ನೈಜ ಇತಿಹಾಸಗಳು, ಪುರಾಣಗಳು, ವೇದಗಳು, ಗೀತೆ ಮತ್ತು ಅಸ್ಪಷ್ಟ ಉಪನಿಷದಗಳನ್ನೂ ಕೂಡ. ಎಲ್ಲವನ್ನೂ ಸಾಂಸ್ಕೃತಿಕ ಸಚಿವಾಲಯ ಅನುಮೋದಿಸಿದೆ. ಅವಳು ಅವೆಲ್ಲವನ್ನೂ ಹದಿನೇಳು ವಿಭಿನ್ನ ಭಾಷೆಗಳಲ್ಲಿ ವ್ಯಾಖ್ಯಾನಿಸಬಲ್ಲಳು, ವಿವರಿಸಬಲ್ಲಳು ಮತ್ತು ಟಿಪ್ಪಣಿ ನೀಡಬಲ್ಲಳು."

"ನನ್ನ ನವೀಕರಿಸಿದ ಸಾಫ್ಟ್‌ವೇರ್ ಕೂಡ ಇದನ್ನು ಮಾಡಬಲ್ಲುದು, "ಎಂದು ಶ್ರೀಮತಿ ತ್ರಿಪಾಠಿ ಅಪಹಾಸ್ಯ ಮಾಡಿದರು.

"ಹೌದು ಮ್ಯಾಡಮ್. ಅದು 2ಡಿಯಲ್ಲಿ. ಆದರೆ ಸಂಸ್ಕಾರಿ ಬಹು 5D ಯ ಬೆರಗುಗೊಳಿಸುವಂತಹ ಅನುಭವವನ್ನು ಪಡೆದಿದೆ, ಸರ್, ಮೇಡಂ.

ತ್ರಿಪಾಠಿಗಳ ಕುಟುಂಬವೇ ಮೌನವಾಯಿತು. "ನೀವು ವೇದಗಳನ್ನು ಕೇಳುವುದು ಮಾತ್ರವಲ್ಲ, ಅದರಲ್ಲಿಯೇ ಮುಳುಗಿ ಹೋಗುತ್ತೀರಿ. ಅವಳು ಭಜನೆಗಳನ್ನು ಹಾಡಿದಾಗ ನಿಮ್ಮ ಮನೆಯ ಗಾಳಿಯಲ್ಲಿರುವ ಅಣುವಣುವೂ ಶುದ್ಧ ಭಕ್ತಿಯಿಂದ ಕಂಪಿಸುತ್ತವೆ. ಅಂತಹ ಕಂಪನಗಳು ಪರಿಸರದ ಕಲುಷಿತ ಜೀವಕೋಶಗಳಲ್ಲಿನ ಪ್ರೋಟಾನ್ ಮೌಲ್ಯಗಳನ್ನು ಶುದ್ಧೀಕರಿಸುತ್ತವೆ ಎಂದು ವೈಜ್ಞಾನಿಕ ಸಂಶೋಧನೆಯು ತೋರಿಸಿದೆ".

ಆಶ್ಚರ್ಯ ಹಾಗೂ ಗಾಬರಿಯಿಂದ ಶ್ರೀಮತಿ ತ್ರಿಪಾಠಿಯರ ತೆರೆದ ಬಾಯಿ ಮುಚ್ಚಲಿಲ್ಲ. ಆದರೆ ಭಾಯಿಸಾಬ್ ಈ ವಿಷಯದಲ್ಲಿ ಹಾಗೆ ಮಾಡದಿರಲು ಕಾರಣವಿತ್ತು. ಅವನು ಹಲ್ಲುಕಿರಿದು ನಕ್ಕ.

"ಇದಷ್ಟೇ ಅಲ್ಲ, ಮೇಡಂ" ಎಂದ ಭಾಯಿಸಾಬ್ ಮತ್ತೆ ಶ್ರೀಮತಿ ತ್ರಿಪಾಠಿಯನ್ನು ಉದ್ದೇಶಿಸಿ ಹೇಳಿದ. "ವಿಶೇಷವಾಗಿ ಅವಳ ಬೆರಳ ತುದಿಗಳನ್ನು ಅಪ್ಪಟ ಚಿನ್ನದಿಂದ ಸೃಷ್ಟಿಸಲಾಗಿದೆ, ಹಾಗಾಗಿ ಅದು ಅಡುಗೆಮನೆ ಅಥವಾ ಪೂಜಾ ಕೊಠಡಿಯಲ್ಲಿರಲಿ, ಅವಳು ಮುಟ್ಟುವ ಎಲ್ಲವೂ ಶುದ್ಧವಾಗಿಯೇ ಇರುತ್ತದೆ. ಇಲ್ಲಿ ಯಾವುದೇ ಸೀಸ ಇಲ್ಲ, ಅಥವಾ ಹೆಚ್ಚಿನ ಲೋಹೀಯ ಕಲ್ಮಶಗಳಿಲ್ಲ ಹಾಗೂ ಅಗ್ಗದ ಮಾದರಿಗಳಿಲ್ಲ. ಇದಲ್ಲದೆ, ನಮ್ಮ ಪೂರ್ವಜರ ಸಾಂಪ್ರದಾಯಿಕ ಆಹಾರ-ತಯಾರಿಕೆಯ ತಂತ್ರಗಳನ್ನು ಮೊದಲೇ ತುಂಬಿಸಿರುತ್ತಾರೆ. ನೀವು ಮನೆಯಲ್ಲಿಯೇ ತಯಾರಿಸಿದ, ಶುದ್ಧ ಆಹಾರವನ್ನು ಆಸ್ವಾದಿಸಬಹುದು ಸರ್, ಮೇಡಮ್. ನೀವು ಮನುಷ್ಯರೂಪಿ ರೋಬೋವನ್ನು ಕರೆದೊಯ್ಯುತ್ತಿಲ್ಲ, ಇವಳು ಸೀತಾ ದೇವಿಯ ತದ್ರೂಪಿ ಮೇಡಂ – ದೇವರು ಅವಳನ್ನು ಎಲ್ಲಾ ಹಾನಿಗಳಿಂದ ರಕ್ಷಿಸಲಿ".

"ವಿವಾಹಪೂರ್ವ ಸಮಾಲೋಚನೆಯ ಬಗ್ಗೆ ಏನು? ಎಂದು ಶ್ರೀ ತ್ರಿಪಾಠಿ ಕೇಳಿದರು. "ನಮ್ಮ ಸಂಸ್ಕೃತಿಗೆ ಒಗ್ಗಿಕೊಳ್ಳಬಹುದಾ?"

"ಈ ಮಾದರಿಗೆ ಯಾವುದೇ ಕೌನ್ಸೆಲಿಂಗ್ ಸೆಷನ್‌ಗಳ ಅಗತ್ಯವಿಲ್ಲ ಸರ್. ಆಕೆಯ ಪವಿತ್ರಾನಿಕ್ ಮೆದುಳಿನಲ್ಲಿ ಅಳವಡಿಸಲಾಗಿರುವ ಡೊಸೈಲ್ ಚಿಪ್ ಅದನ್ನು ಖಚಿತಪಡಿಸುತ್ತದೆ. ಬೋಟ್ ನಲ್ಲಿ ಖುಷಿ, ತಾಳ್ಮೆ ಮತ್ತು ಕಾಳಜಿಯುಳ್ಳ ವ್ಯಕ್ತಿತ್ವ ಪೂರ್ವಸ್ಥಾಪಿತವಾಗಿದೆ. ವಾದ ಮಾಡುವುದಿಲ್ಲ. ಪ್ರಶ್ನೆ ಕೇಳುವುದಿಲ್ಲ. ಸಮಸ್ಯೆ ನೀಡುವುದಿಲ್ಲ. ಇದಕ್ಕಿಂತ ಉತ್ತಮವಾದುದು ಮಾರುಕಟ್ಟೆಯಲ್ಲಿ ಯಾವುದೂ ಇಲ್ಲ ಸರ್, ಇದು ನನ್ನ ಭರವಸೆ. ಈ ಮಾದರಿಯು ತುಂಬಾ ವಿಶೇಷವಾಗಿದೆ ಹಾಗಾಗಿ, ನನ್ನ ಬೆಸ್ಪೋಕ್ ಬಾಟಿಕ್ ದೆಹಲಿಯಾದ್ಯಂತ ಎಲ್ಲಿದ್ದರೂ ವಿತರಣೆಯಾಗುತ್ತದೆ."

"ನಾನು...ನನಗೆ ಏನೋ ಕೇಳಬೇಕಿದೆ," ಎಂದ ರಾಜಾ ಆತಂಕದಿಂದ ತನ್ನ ಹೆತ್ತವರನ್ನು ನೋಡಿದನು. ಅವನ ತಾಯಿ ಗಂಟಿಕ್ಕಿದರು, ಅದನ್ನು ಅರ್ಥಮಾಡಿಕೊಂಡ ತಂದೆ ಹೆಂಡತಿಯನ್ನು ದೂರದ ಕರೆದೊಯ್ದು. ಮಗ ಭಾಯಿಸಾಬ್ಹತ್ತ ಬಂದ.

"ಸರ್?" ರಾಜಾ ಹೇಳಿದ, "ಏನಿಲ್ಲ...ನನಗೆ ಏನೂ ಗೊತ್ತಿಲ್ಲ? ಅಂದರೆ ನನಗೆ ಸ್ಲಟ್‌ಬಾಟ್‌ಗಳೊಂದಿಗೆ ಹೆಚ್ಚಿನ ಅನುಭವವಿಲ್ಲ, ನಾನು ಹೇಳೋದು ನಿಮಗೆ ಅರ್ಥವಾಯಿತಲ್ಲ?..." ಅವನ ಮುಖ ಕೆಂಪಾಯಿತು. ಮಾರಾಟಗಾರನು ಸಂಕೋಚದಿಂದಿದ್ದ ಹುಡುಗನ ಭುಜದ ಮೇಲೆ ಕೈಯಿಟ್ಟು, "ಅವಳೇ ನಿಮಗೆಲ್ಲ ಕಲಿಸುತ್ತಾಳೆ" ಎಂದ. ಸಾಂಸ್ಕೃತಿಕ ಸಚಿವಾಲಯದಿಂದ ಅನುಮೋದಿತವಾದ ಎಲ್ಲಾ ಆಸನಗಳನ್ನು ಹಾಗೂ ಕಾಮಸೂತ್ರ ಮತ್ತು ತಾಂತ್ರಿಕ ಲೈಂಗಿಕ ಪುಸ್ತಕಗಳೂ ಅವಳಿಗೆ ಗೊತ್ತು.".

"ಆದರೆ?ಆದರೆ ಅವಳು ಕನ್ಯೆ ಮತ್ತು ಸಾಮಾನ್ಯವಾಗಿ ವರ?."

"ಮಲಗುವ ಕೋಣೆಯ ಒಳಗೆ," ಅವನು ರಾಜನ ಕಿವಿಯಲ್ಲಿ ಪಿಸುಗುಟ್ಟಿದ, "ಅವಳು ಸ್ಲಟ್‌ಬಾಟ್‌ಗಿಂತ ಹೆಚ್ಚು." ಮಗನ ಕಣ್ಣುಗಳು ಅರಳಿದವು.

"ಸ್ಲಟ್‌ಬಾಟ್‌ಗೆ ತಿಳಿದಿರುವ ವಿಷಯಗಳು ಆಕೆಗೆ ತಿಳಿದಿದೆ ಎಂದು ನೀವು ಹೇಳುತ್ತಿದ್ದೀರಾ?"

"ಅದಕ್ಕಿಂತಲೂ ಹೆಚ್ಚು, " ಎಂದು ಭಾಯಿಸಾಬ್ ಕಣ್ಣು ಮಿಟುಕಿಸಿದ. "ಎಲ್ಲಕ್ಕಿಂತ ಹೆಚ್ಚಾಗಿ, ನಮ್ಮದು ಆಯ್ಕೆಯ ಸ್ವಾತಂತ್ರ್ಯವನ್ನು ಪ್ರೋತ್ಸಾಹಿಸುವ ರಾಷ್ಟ್ರ. ಹಾಗಾದರೆ ನಾವು ಎರಡನ್ನೂ ಏಕೆ ಕೊಳ್ಳಬಾರದು?" ಅವನು ಸಂಸ್ಕಾರಿ ಸೊಸೆಯನ್ನು ನೋಡಲು ತಿರುಗಿದರು, ಅವಳ ಕಣ್ಣುಗಳು ರಾತ್ರಿಯ ಸಂತೋಷಗಳ ಕನಸು ಕಾಣುತ್ತಿರುವಂತೆ ಅರ್ಧ ಮುಚ್ಚಿದವು. ಅಷ್ಟರಲ್ಲಿ ಪೋಷಕರು ಹಿಂತಿರುಗಿದರು.

"ದಯವಿಟ್ಟು ಅವಳನ್ನು ಆನ್ ಮಾಡಬಹುದೇ?" ಶ್ರೀಮತಿ ತ್ರಿಪಾಠಿ ಹೇಳಿದರು, "ನಾವು ಅವಳನ್ನು ಪರೀಕ್ಷಿಸಬೇಕು–"

"ಅಗತ್ಯವಿಲ್ಲ," ಮಗ ಕೂಗಿದನು, "ನಾವು ಅದನ್ನೇ ತೆಗೆದುಕೊಳ್ಳೋಣ!"

"ಆದರೆ... ರಾಜಾ, ದೋಷಗಳೇನಾದರೂ ಇವೆಯೋ ಅಂತ ನಾವು ಮಾದರಿಯನ್ನು ಪರಿಶೀಲಿಸಬೇಕಾಗಿದೆ ... ಧ್ವನಿ, ಕ್ರಿಯೆ, ಕಾರ್ಯಕ್ಷಮತೆ, ಅಂಡಾಶಯಗಳು, ಹಲವಾರು ವಿಷಯಗಳಲ್ಲಿ ದೋಷ ಇರಬಹುದು –"

"ಚಿಂತೆ ಮಾಡ್ಬೇಡಿ ಮೇಡಂ. ಉತ್ಪಾದನಾ ದೋಷಗಳಿಗಾಗಿ ಅವಳು ಜೀವಮಾನದ ವಾರಂಟಿಯೊಂದಿಗೆ ಬರುತ್ತಾಳೆ. ಯಾವುದೇ ಸಣ್ಣ ನ್ಯೂನತೆ ಇದ್ದರೂ ನೀವು ಹೊಚ್ಚ ಹೊಸ ಮಾದರಿಯನ್ನು ಪಡೆ–ಯುತ್ತೀರಿ".

ರಾಜಾ ಮುಖ ಅರಳಿದ್ದನ್ನು ನೋಡಿ ಭಾಯಿಸಾಬ್ ಮಿಂಚಿದನು. ಅವನಿಗೆ ಇದೊಂದು ಒಳ್ಳೆಯ ವ್ಯವಹಾರವಾಗಿತ್ತು. ಮನಸ್ಸಿನಲ್ಲಿಯೇ ಲಾಭವನ್ನು ಎಣಿಸಲಾರಂಭಿಸಿದ.

"ಅವಳ ಬೆಲೆ ಎಷ್ಟು? " ಎಂದು ಶ್ರೀಮತಿ ತ್ರಿಪಾಠಿ ಕೇಳಿದರು.

"ಕೇವಲ ಹತ್ತು ಕೋಟಿ ರೂಪಾಯಿ, ಮೇಡಂ.

ಹತ್ತು ಕೋಟಿ? ಅದು ಹಗಲು ದರೋಡೆ!" ಅವಳು ರೇಗಿದಳು.

"ಜೀವಮಾನದಲ್ಲಿ ಒಂದು ಬಾರಿಯ ಹೂಡಿಕೆ, ಮೇಡಂ. ಮನೆ, ಭವಿಷ್ಯ, ಉನ್ನತ ಸಂಸ್ಕೃತಿ ಎಲ್ಲವನ್ನೂ ಒಟ್ಟಿಗೆ ಭರಿಸಿದಂತಾಗುತ್ತದೆ.

"ನನಗೆ ಅವಳೇ ಬೇಕು, ಮಮ್ಮಿ!

"ರೀ ತ್ರಿಪಾಠಿಯವರೇ, ಮಗನಿಗೆ ಸ್ವಲ್ಪ ತಿಳಿ ಹೇಳಿ! ಖಂಡಿತ, ನಾವು ಅವಳನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲ. ನಮಗೆ ಅಷ್ಟೊಂದು ಹಣ

ಕೊಡಲು ಸಾಧ್ಯವಿಲ್ಲ–" ಅವಳ ದನಿ ಏರಿತು.

"ಆದರೆ, ಡಿಯರ್. ಭಾಯಿಸಾಬ್ ಹೇಳಿದ್ದು ಸರಿಯಲ್ಲವೇ, ನಿನಗೆ ಒಬ್ಬ ಸಂಸ್ಕಾರಿ ಸೊಸೆ ಬೇಕಿತ್ತಲ್ಲವಾ? ಅವನು ನಿನಗೆ ಉತ್ತಮವಾದದ್ದನ್ನು ಮಾತ್ರ ತೋರಿಸುತ್ತಿದ್ದಾನಲ್ಲ.?"

"ಆದರೆ...ಅಷ್ಟು ಖರ್ಚು ಹೇಗೆ ಸಾಧ್ಯ?" ಎಂದು ರೇಗಿದಳು. ಅವಳ ದೇಹ ಜೋರಾಗಿ ಕಂಪಿಸಿತು. ಸೀರೆಯ ಸೆರಗು ಜಾರಿ ಕುಪ್ಪಸ ಕಾಣಿಸಿತು. "ಇದು ನಮ್ಮ ಬಜೆಟ್ನ ಆರು ಪಟ್ಟು ಹೆಚ್ಚು. ಈ ಸೋಮಾರಿ ಮೂರ್ಖನ ಬೇಡಿಕೆಗೆ ನೀವು ಕಳೆದ ಬಾರಿ ಮಣಿದಿದ್ದನ್ನು ನೆನಪಿಸಿಕೊಳ್ಳಿ."

"ಅಷ್ಟು ಸಾಕು, ಶ್ರೀಮತಿ ತ್ರಿಪಾಠಿ!"

ರಿಮೋಟ್‌ನಿಂದ ವಿರಾಮಗೊಳಿಸಿದಂತೆ, ಶ್ರೀಮತಿ ತ್ರಿಪಾಠಿ ನಿಲ್ಲಿಸಿದಳು, ಅವಳ ಮುಖದ ಸ್ನಾಯುಗಳು ನಡುಗುತ್ತಿದ್ದುವು. ದೇಹ ಕಂಭದಂತೆ ನಿಂತಿತು. ಶ್ರೀ ತ್ರಿಪಾಠಿ ನಿಟ್ಟುಸಿರು ಬಿಟ್ಟರು, ಮುಂದಕ್ಕೆ ಬಾಗಿ ಸೆರಗನ್ನು ಭುಜದ ಮೇಲೆ ಹೊದಿಸಿದರು. "ತುಂಬಾ ಕೋಪ ಬಂದಾಗ ಕಲ್ಲಾಗಿ ಬಿಡುತ್ತಾಳೆ" ಎಂದರು.

"ರಿಯಲ್ಲೂಡ್™ ಮಾಡೆಲ್‌ಗಳನ್ನು ಸುರಕ್ಷತಾ ವೈಶಿಷ್ಟ್ಯಗಳಿಂದ ನಿರ್ಮಿಸಲಾಗಿದೆ, ಸರ್," ಭಾಯಿಸಾಬ್ ಅರ್ಥವಾಗುವಂತೆ ತಲೆಯಾಡಿಸುತ್ತಾ ಹೇಳಿದರು. "ನಿಯಂತ್ರಣವಿದೆ ಎಂದು ಖಚಿತಪಡಿಸಿಕೊಳ್ಳಲು ಅನನ್ಯ ವ್ಯಕ್ತಿತ್ವಗಳಿಗೆ ಕೆಲವು ಗುಣಲಕ್ಷಣಗಳು ಇರಬೇಕು. ರೆಟ್ರೋ ರೋಬೋಗಳ ಪ್ರೇಮಿಯಾಗಿ ಇದನ್ನು ನಾನು ಅರ್ಥ ಮಾಡಿಕೊಳ್ಳಬಲ್ಲೆ. ಹೊಸ ವಧುಗಳಲ್ಲಿ ಹೀಗೆ ಕಲ್ಲಾಗುವ ಗುಣವಿಲ್ಲ. ಅದರ ಅಗತ್ಯವೂ ಇಲ್ಲ, ಸರ್, ಅವುಗಳಲ್ಲಿ ಡಾಸಿಲ್ಚಿಪ್? ಇದ್ದೇ ಇರುತ್ತದೆ."

"ಸಂಸ್ಕಾರಿ ಸೊಸೆ ಕೊಳ್ಳಲು ರಿಯಾಯಿತಿ ನೀಡಬಹುದೇ ಅಥವಾ ನಾವು ಕಂತಿನಲ್ಲಿ ಪಾವತಿಸಬಹುದೇ?" ಶ್ರೀ ತ್ರಿಪಾಠಿ ಸ್ತಬ್ಧವಾಗಿ ನಿಂತಿದ್ದ ಹೆಂಡತಿಯನ್ನು ನೋಡುತ್ತಾ ಕೇಳಿದರು. "ರಾಜಾ, ನೀನು ಅಮ್ಮನ ಬಳಿಯೇ ಇರು."

"ನಿಮ್ಮಂತಹ ಮರ್ಯಾದಸ್ತರಿಗಾಗಿ ಏನಾದರೂ ಮಾಡಬಹುದಾ ನೋಡೋಣ? ಎಂದ ಭಾಯಿಸಾಬ್ ಮುಖ ಹೊಳೆಯುತ್ತಿತ್ತು. "ನೀವು ಕೌಂಟರ್ಗೆ ಬರ್ತೀರಾ? ಬಹುಶಃ ನೀವು ನೋಡಬಹುದಾದ ಕೆಲವು... ಹ್ಮ್.. ಯೋಜನೆಗಳಿವೆ."

ಭಾಯಿಸಾಬ್ ಸಂಸ್ಕಾರಿ ಸೊಸೆಯನ್ನು ಬಲು ನಿಧಾನವಾಗಿ ಅದರ ಕಮಲದ ಪಾಡ್ನೊಳಗೇ ಮತ್ತೆ ಪ್ಯಾಕ್ ಮಾಡಿದ. ರಷ್ಯಾದ ಸ್ಲಟ್ಬಾಟ್ನ ಪಾಡನ್ನು ನೋಡುವಂತೆ ಮುಚ್ಚಿದ ಪಾಡ್ ಅನ್ನು ದಿಟ್ಟಿಸುತ್ತ ರಾಜಾ ನಿಟ್ಟುಸಿರು ಬಿಟ್ಟನು. ತ್ರಿಪಾಠಿ ಕಲ್ಲಿನಂತಾಗಿದ್ದ ಶ್ರೀಮತಿ ತ್ರಿಪಾಠಿ ಮತ್ತು ಅವರ ಮಗನನ್ನು ಕಮಲದ ಪಾಡ್‌ನ ಎದುರಿಗಿದ್ದ ಬೆಂಚಿನ ಮೇಲೆ ಕೂರಲು ಬಿಟ್ಟು, ಕಿಟಕಿಯ ಡಿಸ್ಲೇಯ ಹಿಂದಿನ ಕ್ಯಾಶ್ ಕೌಂಟರ್ ತಲುಪಿದರು, ಲೆಕ್ಕ ಮಾಡಲು ಟ್ಯಾಬ್ ಕೈಗೆತ್ತಿಕೊಂಡರು.

ತನ್ನೆದುರು ನಿಂತಿದ್ದ ಶ್ರೀ ತ್ರಿಪಾಠಿಯನ್ನು ಉದ್ದೇಶಿಸಿ "ಸರ್," ಭಾಯಿಸಾಬ್ ಹೇಳಿದ,

"ಸಂಸ್ಕಾರಿ ಸೊಸೆಯ ವಿಶೇಷ ಡೀಲರ್ ಆಗಿರುವುದರಿಂದ, ನಮ್ಮ ಹತ್ತಿರ ಕಡಿಮೆ ಬಡ್ಡಿ ದರದ ಮಾಸಿಕ ಕಂತುಗಳ ಒಂದು ವಿಶೇಷ ಯೋಜನೆ ಇದೆ. ನೀವು ಇಪ್ಪತ್ತು ವರ್ಷ ಅಥವಾ ಮೂವತ್ತು ವರ್ಷಗಳ ಪಾವತಿಯನ್ನು ಆಯ್ಕೆ ಮಾಡಬಹುದು.

"ನಿಮ್ಮ ಮಾಸಿಕ ಕಂತು, ಟ್ಯಾಪ್, ಟಿಪ್, ಟ್ಯಾಪ್, "ಇಪ್ಪತ್ತು ವರ್ಷ ತಿಂಗಳಿಗೆ ನಾಲ್ಕು ಲಕ್ಷದ ಐವತ್ತು ಸಾವಿರ ಅಥವಾ ಮೂವತ್ತು ವರ್ಷಗಳ ಕಂತುಗಳೊಂದಿಗೆ ಸುಮಾರು ಎರಡು ಲಕ್ಷದ ತೊಂಬತ್ತು ಸಾವಿರ ಬರುತ್ತದೆ. ಇವು ಅಂದಾಜು. ನಿಜವಾದ ವೆಚ್ಚಗಳು ಸ್ವಲ್ಪ ಬೇರೆ ಆಗಬಹುದು."

"ಅಷ್ಟೊಂದಾ? ಅದು ನನ್ನ ಗುಮಾಸ್ತ ಸಂಬಳಕ್ಕೆ ಸಾಧ್ಯವಿಲ್ಲ ಭಾಯಿಸಾಬ್."

ಭಾಯಿಸಾಬ್ ತನ್ನ ಕನ್ನಡಕವನ್ನು ಮೂಗಿನ ಮೇಲೆ ತಳ್ಳಿದ. ಮೆಹ್ರೋತ್ರಾರ ಸೋದರ ಎಂದರೆ ನನಗೂ ಸೋದರನೇ. ನೀವು ಇನ್ನೂ ಏನಾದರೂ ಮಾಡಬಹುದಾ? "

ಭಾಯಿಸಾಬ್, ತನ್ನ ಕುಟುಂಬದತ್ತಲೇ ಕಣ್ಣಿಟ್ಟಿದ್ದ ಶ್ರೀ ತ್ರಿಪಾಠಿಯವರನ್ನು ನೋಡಿದನು. ತುಟಿಗಳನ್ನು ಒಳಗೆಳೆಯುತ್ತಾ "ನಿಮಗೆ ಗೊತ್ತಾ" ಎಂದು ಭಾಯಿಸಾಬ್ ತನ್ನ ಉಂಗುರ ತೊಟ್ಟಿದ್ದ ಕೈಯನ್ನು ತಂದೆಯ ಕೈಯ ಮೇಲೆ ಇರಿಸಿದನು. "ನೀವು ನನಗೆ ಸಹೋದರನಂತೆ. ನಾನು ನಿಮಗೆ, ಚೀನಾದಲ್ಲ ಜರ್ಮನಿಯಿಂದ ಆಮದು ಮಾಡಿಕೊಂಡಿರುವ ಸ್ಲಟ್ಬಾಟ್ ಆವೃತ್ತಿ 15.7 ಅನ್ನು ಸಹ ನೀಡುತ್ತೇನೆ ಸರ್, ಅದೂ, ನಿಮ್ಮ ವಯಸ್ಸಿನಲ್ಲಿ, ನೀವು ಸ್ವತಂತ್ರವಾಗಿರಬೇಕು. ಬೇರೆ ದಿಕ್ಕುಗಳಲ್ಲಿಯೂ ನೋಡಬೇಕು?" ಎಂದು ಕಣ್ಣು ಮಿಟುಕಿಸಿದ.

"ಇಲ್ಲ ಇಲ್ಲ. ಅದು ಸಾಧ್ಯವಿಲ್ಲ. ಇದನ್ನು ಕೇಳಿದರೆ ಶ್ಯಾಮ ಗಾಬರಿಯಾಗುತ್ತಾಳೆ. ಹೀಗಿದ್ದರೂ ನಮಗೆ ತಿಂಗಳ ಕಂತು ಕಟ್ಟಲು ಸಾಧ್ಯವಿಲ್ಲ.

"ಹಾಂ.~" ಭಾಯಿಸಾಬ್ ಈಗ ಮೌನವಾದ. ವಿಚಲಿತನಾಗಿ ತನ್ನ

**ಭಾಯಿಸಾಬ್ ಸಂಸ್ಕಾರಿ ಸೊಸೆಯನ್ನು ಬಲು ನಿಧಾನವಾಗಿ ಅದರ ಕಮಲದ ಪಾಡ್‌ನೊಳಗೆ ಮತ್ತೆ ಪ್ಯಾಕ್ ಮಾಡಿದ. ರಷ್ಯಾದ ಸ್ಲಟ್‌ಬಾಟ್‌ನ ಪಾಡ್‌ಅನ್ನು ನೋಡುವಂತೆ ಮುಚ್ಚಿದ ಪಾಡ್‌ಅನ್ನು ದಿಟ್ಟಿಸುತ್ತ ರಾಜಾ ನಿಟ್ಟುಸಿರು ಬಿಟ್ಟನು. ತ್ರಿಪಾಠಿ ಕಲ್ಲಿನಂತಾಗಿದ್ದ ಶ್ರೀಮತಿ ತ್ರಿಪಾಠಿ ಮತ್ತು ಅವರ ಮಗನನ್ನು ಕಮಲದ ಪಾಡ್‌ನ ಎದುರಿಗಿದ್ದ ಬೆಂಚಿನ ಮೇಲೆ ಕೂರಲು ಬಿಟ್ಟು, ಕಿಟಕಿಯ ಡಿಸ್‌ಪ್ಲೇಯ ಹಿಂದಿನ ಕ್ಯಾಶ್ ಕೌಂಟರ್ ತಲುಪಿದರು, ಲೆಕ್ಕ ಮಾಡಲು ಟ್ಯಾಬ್ ಕೈಗೆತ್ತಿಕೊಂಡರು.**

ಕ್ಯಾಲ್ಕುಲೇಟರ್ ಅನ್ನು ಒಗೆದ. "ನಿಮಗೆ ಅಭ್ಯಂತರವಿಲ್ಲದಿದ್ದರೆ, ಸಾರ್, ನೀವು ಶ್ಯಾಮನನ್ನು ಎಲ್ಲಿ ಕೊಂಡಿರಿ ಎಂದು ಹೇಳಬಹುದೇ?"

"ಓ ಶ್ಯಾಮಳನ್ನು ಕನ್ನಾಟ್ ಪ್ಲೇಸಿನ ಸಣ್ಣ ಅಂಗಡಿಯಿಂದ ಕೊಂಡಿದ್ದೆ. ಅದು ಸೆಕೆಂಡ್ ಹ್ಯಾಂಡ್ ವಧುಗಳ ಅಂಗಡಿ. ಆಗ ನನಗೆ ಅದನ್ನು ಮಾತ್ರ ಕೊಳ್ಳಲು ಸಾಧ್ಯವಿತ್ತು. ಆದರೆ ಒಮ್ಮೊಮ್ಮೆ ಸಿಡಿದೇಳುವುದು, ಅಚಲವಾಗುವುದು ಎನ್ನುವುದು, ಎಲ್ಲಾ ರಿಯಲ್ಲೂಡ್™ ಹೆಂಡತಿಯರಲ್ಲಿಯೂ ಈ ಸಮಸ್ಯೆ ಇದೆ ಎಂದು ಕೊಂಡಿದ್ದೇನೆ, ನಮಗಂತೂ ಇದರಿಂದ ಯಾವತ್ತೂ ಯಾವ ತೊಂದರೆಯೂ ಆಗಲಿಲ್ಲ."

"ಅವಳು ವಿಶೇಷವಾದವಳು ಅಲ್ಲವೇ. ತುಂಬಾ ತುಂಬಾ ಅಪರೂಪ ಕೂಡ. ನಾನು ಇಂತಹ ರೋಬಾಟುಗಳನ್ನು ಸಂಗ್ರಹಿಸುವ ರೆಟ್ರೋ ಗುಂಪಿನ ಸದಸ್ಯ. ಹಾಗಿದ್ದೂ ಕೆಲಸ ಮಾಡುತ್ತಿರುವ ಒಂದನ್ನು ನಾನು ನೋಡಿಲಿರಲ್ಲ" ಎಂದ ಭಾಯಿಸಾಬ್ ತುಟಿಗಳನ್ನು ಚಪ್ಪರಿಸಿದ. "ಅವಳ ಎಪಿಡರ್ಮಿಸ್ ಮತ್ತು ಉಗುರುಗಳು ಚಿಪ್ಪಿಂಗ್ ಆಗಿರುವುದನ್ನ ನಾನೂ ಗಮನಿಸಿದ್ದೇನೆ. ನಿರ್ವಹಣೆಗೆ" ಬಹಳ ಖರ್ಚಾಗಿರಬೇಕು. "

"ಓಹ್ ಹೌದು. ನಾವು ಎಷ್ಟು ಸಾಧ್ಯವೋ ಅಷ್ಟು ಪ್ರಯತ್ನಿಸಿದೆವು.





ಮಾಡಿದೆವು. ಆದರೆ ನನಗೆ ಬರುವ ಸಂಬಳದಲ್ಲಿ ಕೆಲವು ಬದಲಾವಣೆಗಳನ್ನಷ್ಟೆ ಮಾಡಬಹುದು. ಕಂಪನಿಯಂತೂ ಈ ಮೊದಲ ತಲೆಮಾರಿನ ಬಾಟ್‌ಗಳ ದುರಸ್ತಿ ಕಾರ್ಯವನ್ನು ಸಹ ನಿಲ್ಲಿಸಿದೆ. ಇದೇ ತೊಂದರೆ."

"ಹೌದು. ಅರ್ಥವಾಯಿತು ಬಿಡಿ. ಅದಿಕ್ಕೆ ಬ್ರದರ್, ನಾನು ನಿಮಗೆ ಸಹಾಯ ಮಾಡಬೇಕೆಂದಿದ್ದೇನೆ." ಎಂದು ಹೇಳುತ್ತಾ ಭಾಯಿಸಾಬ್ ಮುಂದೆ ಬಾಗಿದ. "ನನ್ನ ರೆಟ್ರೊ ಗುಂಪಿನಲ್ಲಿ ಶ್ರೀಮಂತ ಗ್ರಾಹಕರೊಬ್ಬರಿದ್ದಾರೆ. ಸೌತ್‌ಪಾರ್ಕ್‌ನವರು. ಸಾಕಷ್ಟು ಹಣವಂತರು. ಅವರು ತಮ್ಮ ಸಂಗ್ರಹವನ್ನು ಪೂರ್ತಿಗೊಳಿಸಲು ರಿಯಲ್ಮೂಡ್™ ಇರುವ ಮಾದರಿಯನ್ನು ಹುಡುಕುತ್ತಿದ್ದಾರೆ. ಶ್ಯಾಮನಂತ ಮಾದರಿ. ಅವರು ಪಬ್ಲಿಕ್ ಫಸ್ಟ್ಜೆನ್ ಹೋಮ್ ಮ್ಯೂಸಿಯಮ್ಮಿನ ಮಾಲೀಕರು, ಅಲ್ಲಿ ರಿಯಲ್ಮೂಡ್™ ಮಾದರಿಗಳಿಲ್ಲ. ತುಂಬಾ ಗಣ್ಯ ವ್ಯಕ್ತಿ ಮತ್ತು ಸರಿಯಾದ ಹೆಂಡತಿಗಾಗಿ ಯಾವುದೇ ಬೆಲೆ ತೆರಲು ಸಿದ್ಧ.

ಶ್ರೀ ತ್ರಿಪಾಠಿಯವರ ಕಣ್ಣುಗಳು ಅರಳಿದುವು. "ಹಾಂ.. ನೀವು

**ಶ್ರೀ ತ್ರಿಪಾಠಿ ತನ್ನ ಇನ್ನೂ ಸ್ತಬ್ಧವಾಗಿದ್ದ ಹೆಂಡತಿ ಮತ್ತು ಮಗನತ್ತ ಮುಖ ಹೊರಳಿಸಿದ. ಅವನ ಮಗ ಸಂಸ್ಕಾರಿಸೊಸೆಯ ಕಮಲದ ಪಾಡ್ ಅನ್ನು ನೇವರಿಸುತ್ತಾ ನಿಂತಿದ್ದ.**

ನಿಮ್ಮ ಮಿಸ್ಸಸ್‌ಅನ್ನು ದಾನ ಮಾಡಲು ಸಿದ್ಧರಿದ್ದರೆ.... ನಾನು ನಿಮಗೆ ಮೂಲ ಬೆಲೆಯ ಸುಮಾರು ಮೂವತ್ತು ಪ್ರತಿಶತದಷ್ಟು ಬೆಲೆಯಲ್ಲಿ ಸಂಸ್ಕಾರಿಸೊಸೆಯನ್ನು ಕೊಡಬಲ್ಲೆ.

" ಟ್ಯಾಪ್, ಟಿಪ್, ಟ್ಯಾಪ್,

"ಎಂಭತ್ತು ಸಾವಿರ ರೂಪಾಯಿಗಳು, ಅಂದಾಜು, ಮೂವತ್ತು ವರ್ಷಗಳವರೆಗೆ ಮಾಸಿಕ ಕಂತು."

"ಭಾಯಿಸಾಬ್, ಮಗನ ಹೆಂಡತಿಗಾಗಿ ನನ್ನ ಶ್ಯಾಮನನ್ನು ಮಾರು ಅಂತ ಹೇಳುತ್ತಿದ್ದೀಯಾ?"

"ಅವಳನ್ನು ಮಾರಾಟ ಮಾಡಲು ಕೇಳುತ್ತಿಲ್ಲ ಶ್ರೀ ತ್ರಿಪಾಠಿ, ಅವರೆ. ಆದರೆ ಸ್ವಲ್ಪ ಯೋಚಿಸಿ. ಸಂಸ್ಕಾರಿಸೊಸೆ ನಿಮ್ಮ ಜಾತಿ ಮಟ್ಟವನ್ನು ಕನಿಷ್ಠ ಎಂದರೂ 100 ಅಂಕಗಳಿಂದ ಮೇಲಕ್ಕೆತ್ತ ಬಹುದು. ಅದರಿಂದ ನಿಮ್ಮ ಮಗ ಒಳ್ಳೆಯ ಜೀವನ ನಡೆಸಬಹುದು. ಜೊತೆಗೆ ನೀವು ನಿಮ್ಮ ಹೆಂಡತಿಯನ್ನು ಮಾರಬೇಕಿಲ್ಲ. ಅವಳನ್ನು ಕೈ ಬದಲಾಯಿಸುತ್ತಿದ್ದೀರಿ ಅಷ್ಟೆ. ಅವಳ ಮಾಲೀಕತ್ವ ನಿಮ್ಮದೇ ಆಗಿರುತ್ತದೆ."

"ಮತ್ತು ಶ್ಯಾಮನಿಗೆ ಏನಾಗುತ್ತದೆ?

"ಹಾಯಾಗಿ ಬದುಕುತ್ತಾಳೆ ಸಾರ್. ಫಸ್ಟ್‌ಜೆನ್ ಬಾಟ್ ಹೋಮ್ ಅತ್ಯಾಧುನಿಕವಾಗಿದ್ದು, ನಿರ್ವಹಣೆ ತಂಡವು ದೇಸಿಬಾಟ್ಸ್ ನಲ್ಲಿರುವುದಕ್ಕಿಂತ ಉತ್ತಮವಾಗಿದೆ. ಅವಳನ್ನು ಕಾಳಜಿಯಿಂದ ನೋಡಿಕೊಳ್ಳಲಾಗುವುದು, ಬಹುತೇಕ ದಿನಗಳಲ್ಲಿ ಅವಳನ್ನು ಸ್ವಿಚ್ ಆಫ್ ಮಾಡಲಾಗುವುದು, ಅವಳಿಗೇ ಒಂದು ಸ್ವಂತ ಖಾಸಗಿ ಕೋಣೆಯನ್ನು ನೀಡಲಾಗುತ್ತದೆ. ನಾನೇ ಒಪ್ಪಂದವನ್ನು ರಚಿಸುತ್ತೇನೆ ಮತ್ತು ನಿಮ್ಮ ಭೇಟಿಯ ಹಕ್ಕುಗಳು, ವೈವಾಹಿಕ ಹಕ್ಕುಗಳು ಮತ್ತು ನೀವು ಇತರೆ ಯಾವುದೇ ಷರತ್ತುಗಳನ್ನು ಸೇರಿಸಬಯಸಿದರೆ ಸೇರಿಸುತ್ತೇನೆ".

ಭಾಯಿಸಾಬ್ ತ್ರಿಪಾಠಿಯವರ ಹೆಂಡತಿ ಮತ್ತು ಮಗುವಿನ ಕಡೆಗೆ ನೋಡುತ್ತಾ, ಮುಂದುವರಿಸಿದ. "ನನ್ನ ಮಾತು ಕೇಳಿ....ಕುಟುಂಬಕ್ಕೆ ಯಾವುದು ಉತ್ತಮ...ಅಂದರೆ" ಅವನು ಮಾತು ನಿಲ್ಲಿಸಿದ. ಹೊರಗಿನ



ಗದ್ದಲವು ಅವನನ್ನು ತಬ್ಬಿಬ್ಬುಗೊಳಿಸಿತು. ಡಿಸ್‌ಪ್ಲೇ ಕಿಟಕಿಗಳ ಆಚೆಗೆ ವಧು ಬಾಟ್ಗಳ ಸೊಂಟದ ನಡುವಿನಿಂದ ಇಣುಕಿದಾಗ ನೆರಳುಗಳು ಓಡಾಡುವುದನ್ನು ಕಂಡು ಮುಖ ಗಂಟಿಕ್ಕಿದ. ವಿಚಲಿತನಾದ.

"ಮತ್ತು...ನಾನು...ಅವಳನ್ನು ಭೇಟಿಯಾಗಬಹುದೇ?" ಶ್ರೀ ತ್ರಿಪಾಠಿ ಮೃದುವಾಗಿ ಹೇಳಿದರು.

"ಓಹ್ ಅದಕ್ಕೇನು?" ಭಾಯಿ ಸಾಬ್ ಗಿರಾಕಿಯ ಕಡೆ ಹಿಂತಿರುಗಿ ನೋಡಿದ. "ಖಂಡಿತ, ಸರ್, ನಿಮ್ಮ ಮಾಲೀಕತ್ವದ ಹಕ್ಕುಗಳು ನಿಮಗೇ ಉಳಿದಿರುತ್ತವೆ. ನೀವು ಕೇವಲ ನಿಮ್ಮ ಸ್ವತ್ತನ್ನು ಅಂದರೆ ಅಂದರೆ, ಹೆಂಡತಿಯನ್ನು ಬಾಡಿಗೆಗೆ ನೀಡುತ್ತಿದ್ದೀರಿ ಅಷ್ಟೇ."

ಶ್ರೀ ತ್ರಿಪಾಠಿ ತನ್ನ ಇನ್ನೂ ಸ್ತಬ್ಧವಾಗಿದ್ದ ಹೆಂಡತಿ ಮತ್ತು ಮಗನತ್ತ ಮುಖ ಹೊರಳಿಸಿದ. ಅವನ ಮಗ ಸಂಸ್ಕಾರಿಸೊಸೆಯ ಕಮಲದ ಪಾಡ್ ಅನ್ನು ನೇವರಿಸುತ್ತಾ ನಿಂತಿದ್ದ.

"ಹಾಂ. ನಿಮಗೆ ಒಂಟಿತನ ಅನಿಸುವುದಿಲ್ಲ" ಎಂದ ಭಾಯಿಸಾಬ್ ವ್ಯಾಪಾರವನ್ನು ಮುಗಿಸುವ ಆತುರದಲ್ಲಿ. "ನಾನು ಜರ್ಮನ್ ಸಟ್ಲ್‌ಬಾಟ್ ಆವೃತ್ತಿ 15.7 ಅನ್ನು ಸಹ ಕೊಡುತ್ತೇನೆ ಅಂತ ಆಗಲೇ ಹೇಳಿದೆನಲ್ಲ. ಅಷ್ಟಕ್ಕೂ ನಾವು ಹೆಚ್ಚು ಕಡಿಮೆ ಅಣ್ಣ, ತಮ್ಮಂದಿರಲ್ಲವೇ?"

ಕಿರುಚಾಟದ ಶಬ್ದ ಜೋರಾಗಿ ಅವರಿಬ್ಬರನ್ನೂ ಆ ಕಡೆಗೆ ತಿರುಗುವಂತೆ ಮಾಡಿತು. ಭಾಯಿಸಾಬ್‌ನ ಮುಖದ ಮೇಲೆ ಕ್ಷಿಪಣಿಗಳಷ್ಟು ನಿಖರತೆಯಲ್ಲಿ ಜಿಗುಟಾದ ಮಾವಿನ ಹಣ್ಣಿನ ಸಿಪ್ಪೆಗಳನ್ನು ಎಸೆದು, ಹರಟೆ ಹೊಡೆಯುತ್ತಾ, ಕೂಗುತ್ತಾ, ಕೋತಿಗಳ ಗುಂಪು ಅಂಗಡಿಯೊಳಗೆ ನುಗ್ಗಿತು.

"ಕೊಳಕು ಪ್ರಾಣಿಗಳೇ! ನಿಮ್ಮ ಪೂರ್ವಜರು ನರಕದ ಗುಂಡಿಗಳಲ್ಲಿ ಸಾಯಲಿ!" ಭಾಯಿಸಾಬ್ ಕಿರುಚುತ್ತಾ ಪೊರಕೆ ಎತ್ತಿಕೊಂಡು ಮಂಗಗಳ ಹಿಂದೆ ಓಡಿದ. ವ್ಯಾಪಾರ, ಒಪ್ಪಂದ ಎಲ್ಲವೂಮರೆತು ಹೋದಂತೆ ತೋರಿತು. ಶ್ರೀ ತ್ರಿಪಾಠಿಯವರು ಹುಬ್ಬುಗಂಟಿಕ್ಕಿದರು ಮತ್ತು ಒಂದು ಕ್ಷಣದ ಗೊಂದಲದ ನಂತರ ಒಂದು ನಿರ್ಧಾರಕ್ಕೆ ಬಂದರು.

---

*ಶ್ವೇತಾ ತನೇಜ, ಮಕ್ಕಳಿಗಾಗಿ ಆಂಗ್ಲದಲ್ಲಿ ವಿಜ್ಞಾನ ಪುಸ್ತಕಗಳನ್ನೂ, ಕಥೆಗಳನ್ನೂ ಬರೆಯುತ್ತಾರೆ. ಆಂಗ್ಲ ವೆಬ್ ಪತ್ರಿಕೆ ದಿ ಆಂಟೊನಿಮ್ ಮ್ಯಾಗ್ ನಲ್ಲಿ ಪ್ರಕಟವಾದ ಈ ಕಥೆಯನ್ನು ಕನ್ನಡಕ್ಕೆ ಅನುವಾದಿಸಿದವರು ಅಮೃತೇಶ್ವರಿ. ಬಿ.*

*ಮೂಲ: https://www.theantonymmag.com/bhaisaabs-bespoke-brides-boutique-shweta-taneja/*



# ಆಸ್ಪತ್ರೆಯಲ್ಲಿ ಹಾಸ್ಯ ಪ್ರಸವ

**ನನಗೆ ಜ್ಞಾನೋದಯವಾಯಿತು! ಕೆಳಗಿಳಿದು ಹೋಗಿ ಅವರ ಬಳಿ, "ಮಾದೇಶನಿಗೆ ನಾಳೆ ಸಿಜೇರಿಯನ್ ಮಾಡುತ್ತಿದ್ದಾರೆ. ಎಲ್ಲಾ ಸರಿಹೋಗುತ್ತದೆ. ನೀವು ಚಿಂತಿಸಬೇಡಿ" ಎಂದೆ. ಅವರು ಖುಷಿಯಾಗಿ ಕೈಮುಗಿದು ನಿರ್ಗಮಿಸಿದರು. ಹೊಸ ಭಾಷೆ ಕಲಿತ ಸಂತಸದಲ್ಲಿ ನಾನೂ ಹೊರಟೆ!**

**ಡಾ. ಕಿರಣ್ ವಿ.ಎಸ್.**

ಪ್ರಾಯಶಃ ಬೇರೆ ಯಾವುದೇ ವೃತ್ತಿಯಲ್ಲೂ ಕಾಣದಷ್ಟು ವೈವಿಧ್ಯಮಯ ಜನರ ಸಂಪರ್ಕ ದೊರೆಯುವುದು ವೈದ್ಯಕೀಯ ವೃತ್ತಿಯಲ್ಲೇ. ಒಂದೆಡೆ ತನಗೆ ಇರುವ ಆರೋಗ್ಯ ಸಮಸ್ಯೆಗಳನ್ನೆಲ್ಲಾ ಕೂಲಂಕಷವಾಗಿ ಗೂಗಲ್ ಮಾಡಿ ಸೋಸುವವರಾದರೆ, ಮತ್ತೊಂದೆಡೆ ಚರ್ಮದ ಒಳಗೆ ಅಂಗಾಂಗಗಳಿರುತ್ತವೆ ಎಂದಾಗ "ಹೌದಾ" ಎಂದು ಅಚ್ಚರಿಯಿಂದ ಕಣ್ಣರಳಿಸುವ ಮುಗ್ಧರು. ವೈದ್ಯಕೀಯ ಕ್ಷೇತ್ರದಲ್ಲಿ ಹಾಸ್ಯ ಉಕ್ಕುವುದು ಈ ವಿರೋಧಾಭಾಸಗಳಿಂದಲೇ. ಡಾ. ಕಿರಣ್, ವಿ. ಎಸ್. ಅವರ ಅನುಭವಕ್ಕೆ ನಿಲುಕಿದ ಕೆಲವು ಪ್ರಸಂಗಗಳು.

**ಹುಡುಗನೊಬ್ಬನ ಸಿಜೇರಿಯನ್**

ಒಮ್ಮೆ ಆಸ್ಪತ್ರೆಯಿಂದ ಹೊರಬರುತ್ತಿದ್ದಾಗ "ಸಾ... ಸಾ... ಎನ್ನುವ ದನಿ ಹಿಂಬಾಲಿಸಿತು. ತಿರುಗಿ ನೋಡಿದರೆ ಇಬ್ಬರು ನಡುವಯಸ್ಕ ವ್ಯಕ್ತಿಗಳು ನನ್ನೆಡೆಗೆ ಓಡಿಬರುತ್ತಿದ್ದರು. "ಸಾ... ನಮ್ಮ ಮಗೂಗೆ ಇನ್ನೂ ಸಿಜೇರಿಯನ್ ಮಾಡಿಲ್ಲ. ಸ್ವಲ್ಪ ನೋಡ್ತೀರಾ?"ಎಂದರು. ಯಾವ ಗರ್ಭಿಣಿಯ ಬಗ್ಗೆ ಹೇಳುತ್ತಿದ್ದಾರೆ ಎಂದು ನೆನಪಾಗಲಿಲ್ಲ. "ಬಸುರಿ ವಾರ್ಡಿನಲ್ಲಿ ಕೇಳಿ" ಎಂದೆ. ಅವರು ಅಚ್ಚರಿಯಿಂದ, "ಬಸುರಿ ವಾರ್ಡಿನಲ್ಲಿ ಅಲ್ಲ ಸಾ. ನಮ್ಮ ಮಗಾ ಇರೋದು ಮೂರನೇ ಮಹಡಿಯಲ್ಲಿ" ಎಂದರು. ಅದು ಸಾಮಾನ್ಯ ಶಸ್ತ್ರಚಿಕಿತ್ಸೆಯ ರೋಗಿಗಳ ವಾರ್ಡ್. ಅಲ್ಲೇಕೆ ಬಸುರಿಯನ್ನು ದಾಖಲಿಸಿದರು ಎಂದು ಆಲೋಚಿಸುತ್ತಾ, "ಹೆಸರೇನು?"ಎಂದೆ. "ಮಾದೇಸ" ಎಂದರು. "ನಿನ್ನ ಹೆಸರಲ್ಲಪ್ಪಾ; ಬಸುರಿಯ ಹೆಸರೇನು?"ಎಂದೆ. "ಬಸುರಿ ಅಲ್ಲ ಸಾ. ನಮ್ಮ ಮಗಾ ಮಾದೇಸಾ. ಹದಿನಾರು ವರ್ಷದೋನು" ಎಂದರು.

ಗರ್ಭಿಣಿಯ ಹೆರಿಗೆ ಒಂದು ನೈಸರ್ಗಿಕ, ಸಹಜ ವಿಧಾನ. ಆದರೆ, ಈ ಪ್ರಕ್ರಿಯೆಯಲ್ಲಿ ಅಡೆತಡೆ ಉಂಟಾದರೆ, ಅಥವಾ ಸಹಜ ಹೆರಿಗೆಗೆ ಬೇರೆ ಯಾವುದಾದರೂ ಸಮಸ್ಯೆ ಇದ್ದರೆ, ಶಸ್ತ್ರಚಿಕಿತ್ಸೆಯ ಮೂಲಕ ಗರ್ಭಕೋಶದಿಂದ ಮಗುವಿನ ಹೆರಿಗೆ ಮಾಡಿಸಲಾಗುತ್ತದೆ. ಬಹಳ ಕಾಲದಿಂದಲೂ ಇದನ್ನು ಸಿಜೇರಿಯನ್ ಹೆರಿಗೆ ಎಂದು ಕರೆಯುತ್ತಾರೆ. ರೋಮಿನ ಚಕ್ರವರ್ತಿಯಾಗಿದ್ದ ಜೂಲಿಯಸ್ ಸೀಜರ್ ಇಂತಹ ಶಸ್ತ್ರಚಿಕಿತ್ಸೆಯ ಮೂಲಕವೇ ಜನಿಸಿದ ಎಂದು ಪ್ರತೀತಿ. ಅದಕ್ಕೇ ಆ ಹೆಸರು.

ನನಗೆ ಪೀಕಲಾಟ. ಹದಿನಾರು ವರ್ಷದ ಹುಡುಗನನ್ನು ಸಿಜೇರಿಯನ್ ಶಸ್ತ್ರಚಿಕಿತ್ಸೆ ಮಾಡಲು ಸಾಮಾನ್ಯ ಶಸ್ತ್ರಚಿಕಿತ್ಸೆಯ ರೋಗಿಗಳ ವಾರ್ಡಿಗೆ ಯಾರು ಸೇರಿಸಿದರು? ದಾಖಲಾತಿ ಮಾಡುವಾಗ ಗುಮಾಸ್ತರಿಂದ ಏನಾದರೂ ತಪ್ಪಾಯಿತೇ? ಇದು ನಾಲ್ಕು ಜನರಿಗೆ ತಿಳಿದರೆ ಆಸ್ಪತ್ರೆಗೆ ಕೆಟ್ಟ ಹೆಸರಲ್ಲವೇ? ತಲೆ ಕೆರೆದುಕೊಂಡು ಹೇಳಿದೆ, "ನೀವು ಇಲ್ಲೇ ಇರಿ. ನಾನು ವಿಚಾರಿಸಿ ಬರುತ್ತೇನೆ". ಅವರು ತಲೆಯಾಡಿಸಿದರು.

ಮತ್ತೆ ಕಾಲೆಳೆದುಕೊಂಡು ಮೂರು ಮಹಡಿ ಹತ್ತಿದ್ದಾಯಿತು. ರೋಗಿ ಮಾದೇಶ ಅಲ್ಲಿಯೇ ಇದ್ದ. ಆತನ ದಾಖಲಾತಿ ನೋಡಿದೆ. ಆತನಿಗೆ ಹೊಟ್ಟೆಯಲ್ಲಿ ಗೆಡ್ಡೆ ಇತ್ತು. ಅದರ ಸಲುವಾಗಿ ಶಸ್ತ್ರಚಿಕಿತ್ಸೆಯ ವಾರ್ಡಿಗೆ ದಾಖಲಾಗಿದ್ದ. ನಿರಾಳದ ನಿಟ್ಟುಸಿರು ಬಿಡುವಂತಾಯಿತು. ಆ ವೇಳೆಗೆ ಪರಿಚಿತ ಹಿರಿಯ ವೈದ್ಯರೊಬ್ಬರು ಬಂದರು. "ಏನಿಲ್ಲಿ?"ಎಂದು ಕುಶಲ ವಿಚಾರಿಸಿದರು. ನಡೆದುದ್ದನ್ನೆಲ್ಲಾ ಅವರಿಗೆ ಹೇಳಿದೆ. ಅವರು ನಕ್ಕು ಹೇಳಿದರು "ಹಲವಾರು ಹಳ್ಳಿ ಮಂದಿ ಯಾವುದೇ ಶಸ್ತ್ರಚಿಕಿತ್ಸೆಯನ್ನೂ ಸಿಜೇರಿಯನ್ ಎಂದೇ ಕರೆಯುತ್ತಾರೆ. ಅವರಿಗೆ ತಿಳಿದಿರುವ ಶಸ್ತ್ರಚಿಕಿತ್ಸೆಯ ಹೆಸರು ಅದೊಂದೇ. ಮಿದುಳಿನದ್ದಾಗಲೀ, ಹೃದಯದ್ದಾಗಲೀ, ಕಾಲಿನದ್ದಾಗಲೀ ? ಶಸ್ತ್ರಚಿಕಿತ್ಸೆ ಎಂದರೆ ಅವರ ಪಾಲಿಗೆ ಅದು ಸಿಜೇರಿಯನ್. ಲ್ಯಾಪ್ರಾಟಮಿ, ವ್ಯಾಲ್ವೋಟಮಿ, ಇಂಪ್ಲ್ಯಾಂಟ್ ಮೊದಲಾದ ಕಷ್ಟಕರ ಹೆಸರುಗಳಿಗಿಂತಲೂ ಸಿಜೇರಿಯನ್ ಎನ್ನುವುದು ಅವರಿಗೆ

ಸರಾಗ. ಜೊತೆಗೆ, ತಮ್ಮದಲ್ಲದ ಪದವನ್ನು ಹೇಳಲು ಅವರಿಗೆ ಬಹಳ ಹೆಮ್ಮೆ ಅನಿಸುತ್ತದೆ. ಅವರ ಜೊತೆಯಲ್ಲಿರುವವರೂ ಇಂಗ್ಲೀಷ್ ಹೆಸರು ಕೇಳಿ ಪ್ರಭಾವಿತರಾಗುತ್ತಾರೆ. ಅವರ ಮಾತಿನ ಅರ್ಥ ಶಸ್ತ್ರಚಿಕಿತ್ಸೆ ಎಂದೇ. ನೀವು ತಲೆ ಕೆಡಿಸಿಕೊಳ್ಳಬೇಡಿ" ಎಂದರು.

ನನಗೆ ಜ್ಞಾನೋದಯವಾಯಿತು! ಕೆಳಗಿಳಿದು ಹೋಗಿ ಅವರ ಬಳಿ, "ಮಾದೇಶನಿಗೆ ನಾಳೆ ಸಿಜೇರಿಯನ್ ಮಾಡುತ್ತಿದ್ದಾರೆ. ಎಲ್ಲಾ ಸರಿಹೋಗುತ್ತದೆ. ನೀವು ಚಿಂತಿಸಬೇಡಿ" ಎಂದೆ. ಅವರು ಖುಷಿಯಾಗಿ ಕೈಮುಗಿದು ನಿರ್ಗಮಿಸಿದರು. ಹೊಸ ಭಾಷೆ ಕಲಿತ ಸಂತಸದಲ್ಲಿ ನಾನೂ ಹೊರಟೆ!

**ಅವಳು ಕೂಡ ನಾನೇ !**

ದಿನ ತುಂಬಿದ ಬಸುರಿ. ದಾರಿಯಲ್ಲಿ ರಸ್ತೆ ಸಂಚಾರ ಸ್ಥಗಿತವಾದ ಪರಿಣಾಮ ಕಡೆಯ ಘಳಿಗೆಯಲ್ಲಿ ಆಸ್ಪತ್ರೆ ತಲುಪಿದ್ದಾರೆ. ಆಕೆಗೆ ಹೆರಿಗೆ ನೋವು. ಇನ್ನೂ ಆಸ್ಪತ್ರೆ ತಲುಪುವ ಮುನ್ನವೇ ಆಕೆಗೆ ನೋವು ತೀವ್ರವಾಗಿದೆ. ಆಕೆ ಹೆರಿಗೆ ವಾರ್ಡ್ ತಲುಪುವುದು ತಡವಾದೀತು ಎಂದು ಆಸ್ಪತ್ರೆಯ ಆಗಮನದ ಲಾಬಿಯಲ್ಲೇ ನಾಲ್ಕೂ ಬದಿಗಳಲ್ಲಿ ತೆರೆಗಳನ್ನು ಹಾಕಿ ತಾತ್ಕಾಲಿಕ ಚಿಕಿತ್ಸೆಯ ಕೋಣೆಯೊಂದರಂತೆ ವ್ಯವಸ್ಥೆ ಮಾಡಿ, ಸುತ್ತಮುತ್ತಲ ವಿಕ್ಷಿಪ್ತ ಆಸಕ್ತಿಯ ಜನರನ್ನು ಸೆಕ್ಯುರಿಟಿಯ ಸಹಾಯದಿಂದ ದೂರಮಾಡುತ್ತಾ, ಸ್ತ್ರೀ ವೈದ್ಯರನ್ನು ತುರ್ತಾಗಿ ಕರೆದು, ಹೆರಿಗೆ ಮಾಡಿಸಿದ್ದಾರೆ. ಸಹಜವಾಗಿ ಹೆರಿಗೆಯಾಗಿದೆ. ಹೆರಿಗೆಯ ನಂತರ ಆಕೆ ಕ್ಷೇಮವಾಗಿದ್ದಾರೆಯೇ ಎಂದು ಪರೀಕ್ಷೆ ಮಾಡುತ್ತಿದ್ದೆ. ಆಕೆಯೋ, ಈ ವಿಷಮ ಪರಿಸ್ಥಿತಿ ತಂದ ನಾಚಿಕೆಯನ್ನು ಸಹಿಸಲಾಗದೇ ಜೋರಾಗಿ ಅಳುತ್ತಿದ್ದಾರೆ. ಸುಮ್ಮನೆ ಇರಲೊಲ್ಲರು.

ಅವರನ್ನು ಸಮಾಧಾನ ಪಡಿಸಲು ನಾನೆಂದೆ "ಈ ರೀತಿ ಎಷ್ಟೋ ಜನಕ್ಕೆ ಆಗುತ್ತದೆ ಕಣಮ್ಮಾ. ನೀವು ಭಾಗ್ಯವಂತೆ. ಕನಿಷ್ಠ ಆಸ್ಪತ್ರೆಯ ಒಳಭಾಗದಲ್ಲಿ ಕ್ಷೇಮವಾಗಿ ಹೆರಿಗೆ ಮಾಡಿಸಿಕೊಂಡಿದ್ದೀರಿ. ಎರಡು-ಮೂರು ವರ್ಷಗಳ ಹಿಂದೆ ಒಬ್ಬರು ಬಂದಿದ್ದರು. ಅವರಿಗೆ ಆಂಬ್ಯುಲೆನ್ಸ್ ಒಳಗೇ ಹೆರಿಗೆ ನೋವು ಬಂದಿತ್ತು. ಆಸ್ಪತ್ರೆಯ ಒಳಗೂ ಬರಲಾಗಲಿಲ್ಲ. ಕಡೆಗೆ ಆಸ್ಪತ್ರೆಯ ವೈದ್ಯರು ಆಗಮನ ದ್ವಾರದ ಮುಂಭಾಗದಲ್ಲಿ ನಿಲ್ಲಿಸಿದ ಆಂಬ್ಯುಲೆನ್ಸ್ ಒಳಗೇ ಹೋಗಿ ಅವರ ಹೆರಿಗೆ ಮಾಡಿಸಿದರು. ಯಾರಿಗಾದರೂ ಅದಕ್ಕಿಂತಲೂ ಪೇಚಿನ ವಿಷಯ ಇದ್ದೀತೇ? ಅವರಿಗೆ ಲೆಕ್ಕ ಹಾಕಿದರೆ ನೀವು ಪುಣ್ಯ ಮಾಡಿದ್ದೀರಿ."

ಆಕೆಗೆ ಸಮಾಧಾನ ಆಗುತ್ತದೆ ಎಂದು ಭಾವಿಸಿ ಹೇಳಿದ ಈ ಮಾತುಗಳನ್ನು ಕೇಳಿ ಆಕೆ ಇನ್ನೂ ಜೋರಾಗಿ ಅಳಲು ಆರಂಭಿಸಿದರು. ಆ ತಾರಕ ಗೋಳಿನ ನಡುವೆ ಅವರ ಅಸ್ಪಷ್ಟ ಮಾತುಗಳು ಕೇಳಿದವು "ಅದೂ ನಾನೇ....."!

ಬಾಯಿಗೆ ಬೆರಳು

ವ್ಯಾಸಂಗದ ತರಬೇತಿಯ ವೇಳೆ ಮಕ್ಕಳ ವೈದ್ಯ ತಜ್ಞರೊಬ್ಬರಿದ್ದರು. ಬಹಳ ಬುದ್ಧಿವಂತರಾದರೂ ಶೀಘ್ರಕೋಪಿ, ಖಡಕ್ ಸ್ವಭಾವದವರು. ಮಕ್ಕಳ ವೈದ್ಯರಿಗೆ ವಿಪರೀತ ತಾಳ್ಮೆ ಬೇಕು. ಆದರೆ, ಇವರಿಗೆ ಅದೊಂದು ಬಿಟ್ಟು ಬೇರೆಲ್ಲವೂ ಇತ್ತು. ಅವರ ತರಗತಿಗಳಲ್ಲಿ ಕಮಕ್ ಕಿಮಕ್ ಎನ್ನುವಂತಿಲ್ಲ.

ಆಸ್ಪತ್ರೆಯ ಹೊರರೋಗಿ ವಿಭಾಗದಲ್ಲಿ ಅವರು ಒಮ್ಮೆ ಸಣ್ಣ ಮಕ್ಕಳನ್ನು ಪರೀಕ್ಷೆ ಮಾಡುವ ವಿಧಾನವನ್ನು ನಮಗೆ ಪ್ರಾತ್ಯಕ್ಷಿಕವಾಗಿ ಕಲಿಸುತ್ತಿದ್ದರು. ಮಗು ಜೋರಾಗಿ ಅಳುತ್ತಿದ್ದರೆ ಅದರ ಹೃದಯದ ಬಡಿತ, ಶ್ವಾಸದ ಸದ್ದುಗಳನ್ನು ಕೇಳಿಸಿಕೊಳ್ಳಲು ಆಗುವುದಿಲ್ಲ. ಹೀಗಾಗಿ, ಅಳುವನ್ನು ನಿಲ್ಲಿಸಲು ನಾನಾ ತಂತ್ರಗಾರಿಗೆ ಮಾಡಬೇಕಾಗುತ್ತದೆ. ಮಗುವಿನ ಗಮನವನ್ನು ಸೆಳೆಯುವ ಸದ್ದುಗಳು, ಚೇಷ್ಟೆಗಳು, ಮಾತುಗಳನ್ನು ಬಳಸಬೇಕಾಗುತ್ತದೆ. ಇದನ್ನೆಲ್ಲಾ ಹೇಳಿಕೊಡುತ್ತಿದ್ದ ಅವರು ಅಳುವ ಮಗುವನ್ನು ಸಮಾಧಾನಗೊಳಿಸಲು ಮಗುವಿನ ತಾಯಿಗೆ "ಬಾಯಿಗೆ ಬೆರಳು ಕೊಡಮ್ಮಾ" ಎಂದು ಹೇಳಿ ತಮ್ಮ ಸ್ಟೆಥೋಸ್ಕೋಪ್ ಕಿವಿಗೆ ಹಾಕಿಕೊಂಡು ಮಗುವಿನ ಹೃದಯದ ಬಡಿತ ಆಲಿಸಲು ಸನ್ನದ್ಧರಾದರು. ಹತ್ತಾರು ಸೆಕೆಂಡುಗಳ ನಂತರವೂ ಮಗು ಅಳುತ್ತಲೇ ಇತ್ತು. ನಾವುಗಳು ಸಣ್ಣನೆ ನಗುತ್ತಿದ್ದೆವು. ಕೋಪಗೊಂಡ ಅವರು "ಬಾಯಿಗೆ ಬೆರಳು ಕೊಡಲು ಹೇಳಿದೆನಲ್ಲಾ?"ಎಂದು ಜೋರು ಮಾಡಿ ಮಗುವಿನ ತಾಯಿಯ ಕಡೆ ನೋಡಿದರು. ಆ ಮಹಾತಾಯಿ ತನ್ನ ಬೆರಳನ್ನು ತನ್ನ ಬಾಯಲ್ಲಿ ಇಟ್ಟುಕೊಂಡು ನಿಂತಿದ್ದರು! ಆಕೆಗೆ ಹೇಳಬೇಕೆನಿಸಿದರೂ, ಆ ವೈದ್ಯರ ಕೋಪದ ಅರಿವಿದ್ದ ನಾವುಗಳು ನಮ್ಮಲ್ಲೇ ನಗುತ್ತಾ ಗಪ್-ಚುಪ್ ಆಗಿದ್ದೆವು.

ಅಸಹನೆಗೊಂಡ ನಮ್ಮ ತಜ್ಞ ವೈದ್ಯರು ಆಕೆಯನ್ನು ಆಕ್ಷೇಪಿಸುತ್ತಾ, "ನಿನ್ನ ಬಾಯಿಗಲ್ಲ; ಸರಿಯಾಗಿ ಬಾಯಿಗೆ ಬೆರಳು ಕೊಡು" ಎಂದು ಮಗುವಿನತ್ತ ತೋರಿದರು. ಆದರೆ, ಈಗಾಗಲೇ ವೈದ್ಯರ ಕೋಪದಿಂದ ದಿಗಿಲು ಬಿದ್ದಿದ್ದ ಆಕೆ ತನ್ನ ಬಾಯಿಂದ ಬೆರಳು ತೆಗೆದು ಸೀದಾ ನಮ್ಮ ವೈದ್ಯರ ಬಾಯಿಗೇ ಇಡಲು ಹೋದರು! ಈ ಏಕಾಏಕಿ ಅನಿರೀಕ್ಷಿತ ಬೆಳವಣಿಗೆಯಿಂದ ಅಪ್ರತಿಭರಾದ ತಜ್ಞ ವೈದ್ಯರು ಸೀದಾ ಹಿಂದಕ್ಕೆ ಜಿಗಿದು ಅಂತಿಮ ಕ್ಷಣದಲ್ಲಿ ತಪ್ಪಿಸಿಕೊಂಡರು! ಅಲ್ಲಿಯವರೆಗೆ ನಗುವನ್ನು ಬಿಗಿ ಹಿಡಿದಿದ್ದ ನಾವುಗಳು ಜೋರಾಗಿ ನಗುವಂತಾಯಿತು. ಗೊಂದಲಕ್ಕೆ ಬಿದ್ದ ಮಗುವಿನ ತಾಯಿ ತಾನೂ ಪೆಚ್ಚಾಗಿ ನಕ್ಕಳು. ಘಟನೆಯ ಸರಣಿ ಎಷ್ಟು ಬಲವಾಗಿತ್ತೆಂದರೆ, ಆ ಶೀಘ್ರ ಕೋಪಿ ವೈದ್ಯರೂ ಜೋರಾಗಿ ನಕ್ಕುಬಿಟ್ಟರು! ಅಂದಿನ ತರಗತಿ ಅಲ್ಲಿಗೇ ಬರಖಾಸ್ತಾಯಿತು!

**ಈವತ್ತೇ ಆಗಲಿ!**

ತುಂಬು ಗರ್ಭಿಣಿಯೊಬ್ಬರು ಆಸ್ಪತ್ರೆಯ ದಾಖಲಾತಿ ವಿಭಾಗದಲ್ಲಿ ನಿಂತಿದ್ದರು. ತಮ್ಮ ಸರದಿ ಬಂದಾಗ "ಹೆರಿಗೆ ವಾರ್ಡಿನಲ್ಲಿ ಅಡ್ಮಿಟ್ ಆಗಬೇಕು" ಎಂದರು. ಆದರೆ, ತಕ್ಷಣಕ್ಕೆ ಹೆರಿಗೆ ಆಗುವ ಯಾವ ಲಕ್ಷಣಗಳೂ ಅವರಿಗೆ ಇರಲಿಲ್ಲ. ಹೆರಿಗೆ ನೋವು, ಗರ್ಭಸ್ಥ ಮಗುವಿನ ಚಲನೆ, ಇತ್ಯಾದಿ ಪ್ರಶ್ನೆಗಳನ್ನೆಲ್ಲಾ ತಾಳ್ಮೆಯಿಂದ ಕೇಳಿದ್ದಾಯಿತು. ಅಡ್ಮಿಟ್ ಮಾಡುವಂಥ ಪ್ರಮೇಯವೇನೂ ಅವರಿಗೆ ಇರಲಿಲ್ಲ. ಕಡೆಗೆ, "ನೀವು ಏತಕ್ಕಾಗಿ ಅಡ್ಮಿಟ್ ಆಗುತ್ತಿದ್ದೀರಿ?" ಎಂದಾಗ ಆಕೆ "ಡಾಕ್ಟರು ಈ ದಿನ ನನಗೆ ಹೆರಿಗೆ ಆಗುತ್ತದೆ ಎಂದು ಚೀಟಿಯಲ್ಲಿ ಬರೆದುಕೊಟ್ಟಿದ್ದಾರೆ. ಅದಕ್ಕೇ ಬಂದು ಹೆರಿಗೆ ಮಾಡಿಸಿಕೊಂಡು ಮಗು ತೆಗೆದುಕೊಂಡು ಹೋಗಲು ಬಂದಿದ್ದೇನೆ" ಎಂದರು!

ಬಸುರಿಯ ಅಂತಿಮ ಋತುಸ್ರಾವ ದಿನದ ಲೆಕ್ಕಾಚಾರದಲ್ಲಿ ಹೆರಿಗೆ ಆಗಬಹುದಾದ ಒಂದು ಅಂದಾಜು ತಾರೀಖನ್ನು ವೈದ್ಯರು ನೀಡುತ್ತಾರೆ. ಆ ದಿನಾಂಕವನ್ನು ಬಹಳ ಗಂಭೀರವಾಗಿ ಪರಿಗಣಿಸಿದ್ದ ಆಕೆ ಆನ್ಲೈನ್ ಡೆಲಿವರಿ ಮಾದರಿಯಲ್ಲಿ ನಿಖರವಾಗಿ ಅದೇ ದಿನ ಹೆರಿಗೆ ಮಾಡಿಸುತ್ತಾರೆ ಎಂದು ನಂಬಿದ್ದರು. ಕಡೆಗೆ ಸಮಾಧಾನಪಡಿಸಿ ಅವರನ್ನು ಕಳಿಸಿದ್ದಾಯಿತು. ನಾಲ್ಕು ದಿನಗಳ ನಂತರ ಅವರಿಗೆ ಪ್ರಸವವಾಯಿತು. ಹೆರಿಗೆಗೆ ತಪ್ಪು ತಾರೀಖು ಕೊಟ್ಟರೆಂದು ವೈದ್ಯರ ಮೇಲೆ ಅವರು ಆಸ್ಪತ್ರೆಯಲ್ಲಿ ಎಲ್ಲರಿಗೂ ಶಿಕಾಯತು ಮಾಡಿದರು!

*ಡಾ. ಕಿರಣ್ ವಿ.ಎಸ್. ಶಿಶು ಹೃದಯರೋಗ ತಜ್ಞರು ಹಾಗೂ ವಿಜ್ಞಾನ ಲೇಖಕ.*




# ವ್ಯಂಗ್ಯಚಿತ್ರಗಳು

ವಿ ಎಸ್ ಎಸ್ ಶಾಸ್ತ್ರಿ
ಹರಿಣಿ ಶೆಟ್ಟಿ
ರಘುಪತಿ ಶೃಂಗೇರಿ








ಗಾಳಿಗಿಂತ ವೇಗ ಯಾವುದು ಮಮ್ಮೀ...?
ಏರ್ಟೆಲ್ 5ಜೀ ಅಲ್ವೇನೋ...?






ಬೇಗ ಅರಿಸಿನ ಕುಂಕುಮ
ತಗೋಂಬಾರೆ..
ದೀಪಾವಳಿಗೆ
ರಾಕೆಟ್ ಬಿಡೋಕ್ಕೆ
ರೋಬೋ
ತಂದಿದ್ದೀನಿ...








# ಮುಠ್ಠಾಳರ ದಿನದಲ್ಲಿ ವಿಜ್ಞಾನಿಗಳು

ಕೊಳ್ಳೇಗಾಲ ಶರ್ಮ

**ಏಪ್ರಿಲ್ ಫೂಲ್ ಲೇವಡಿಗೂ ಸಂಬಂಧವೇನು ಎನ್ನಬೇಡಿ. ಏಪ್ರಿಲ್ ಫೂಲಿನ ದಿನ ಪ್ರಾಯೋಗಿಕವಾಗಿ ಯಾರನ್ನಾದರೂ ಮುಠ್ಠಾಳರನ್ನಾಗಿಸುತ್ತೇವಷ್ಟೆ. ಇಂತಹ ಲೇವಡಿಗಳು ವಿಜ್ಞಾನಿಗಳಿಗೆ ಹೊಸತೇನಲ್ಲ. ಪ್ರತಿ ವರ್ಷವೂ ಆರ್ಕೈವ್ ಆರ್ಗ್ ಎನ್ನುವ ಪತ್ರಿಕೆಯಲ್ಲಿ ಏಪ್ರಿಲ್ ಒಂದರಂದು ಹಲವು ಹೊಸ ಸಂಶೋಧನೆಗಳು ಪ್ರಕಟಣೆಯಾಗುತ್ತವೆ.**

**"ನಗೆಯು ಬರುತಿದೆ, ಎನಗೆ ನಗೆಯು ಬರುತಿದೆ ॥ಪ ॥**
**ಜಗದೊಳಿರುವ ಮನುಜರೆಲ್ಲ ಹಗರಣ ಮಾಡುವುದ ಕಂಡು"**

ದಾಸರ ಈ ಮಾತು ಆಲ್ಬರ್ಟ್ ಐನ್‌ಸ್ಟೀನ್‌ರ ಈ ಈಕ್ವಲ್ಸ್ ಎಂಸಿ ಸ್ಕ್ವೇರ್ ಎನ್ನುವ ಸೂತ್ರದಷ್ಟೆ ಅಮರ. ಹಗರಣ ಮಾಡುವವರಲ್ಲಿ ಅವರು, ಇವರು ಎನ್ನುವ ಹಾಗಿಲ್ಲ. ಎಲ್ಲರೂ ಹಗರಣ ಮಾಡುತ್ತಾರಷ್ಟೆ. ವಿಜ್ಞಾನಿಗಳು ಬೇರೆಯಲ್ಲವಲ್ಲ. ಅವರಲ್ಲಿಯೂ ಹಗರಣಗಳಿವೆ, ಜೋಕುಗಳಿವೆ, ವಿಡಂಬನೆಗಳಿವೆ, ವೈರುಧ್ಯಗಳಿವೆ. ಹೀಗೆ ನಗೆಯುಕ್ಕಿಸುವ ಎಲ್ಲ ಬಗೆಯ ಹಾಸ್ಯ ಸಂದರ್ಭಗಳೂ ವಿಜ್ಞಾನ ಜಗತ್ತಿನಲ್ಲಿ ಇವೆ. ಹಾಗಿದ್ದೂ ವಿಜ್ಞಾನ ಎಂದರೆ ಅದೊಂದು ಗಂಭೀರ ಚಟುವಟಿಕೆ ಎಂದು ಹೇಳುವವರನ್ನು ಕಂಡರೆ ಪಾಪ ಎನ್ನಿಸುತ್ತದೆ. ಅಂತಹವರೂ ಇದ್ದಾರೆ ಎನ್ನುವುದು ಸತ್ಯ!

ನಾನು ಹಿಂದೆ ಸೈನ್ಸ್ ರಿಪೋರ್ಟರಿನಲ್ಲಿ ಉಪಸಂಪಾದಕನಾಗಿದ್ದ ಕಾಲ. ಹಾಸ್ಯ ಸಂಚಿಕೆಯೊಂದನ್ನು ತರುವ ಉದ್ದೇಶದಿಂದ ಹಲವು ಪ್ರಮುಖ ವಿಜ್ಞಾನಿಗಳಿಗೆ ಪತ್ರ ಬರೆದು, ನಿಮ್ಮ ಜೀವನದಲ್ಲಿ ನಡೆದ ಹಾಸ್ಯ ಘಟನೆಯೊಂದನ್ನು ಹಂಚಿಕೊಳ್ಳಬಹುದೇ ಎಂದು ಕೇಳಿದ್ದೆವು. ಬಹಳಷ್ಟು ಜನರಿಂದ ಉತ್ತರ ಬರಲೇ ಇಲ್ಲ ಎನ್ನಿ. ಕೆಲವರಿಂದ ಹಾಸ್ಯ ಎನ್ನಿಸುವ ಘಟನೆಗಳ ವಿವರಣೆ ಬಂತು. ಆದರೆ ಆ ಬರೆಹಗಳು ತಿದ್ದಿದಲ್ಲದೆ ನಗು ಬರುವಷ್ಟು ಲಘುವಾಗಿ ಇರಲಿಲ್ಲ. ಇವೆಲ್ಲದರ ನಡುವೆ ಭಾರತದ ಸುಪ್ರಸಿದ್ಧ ರಸಾಯನವಿಜ್ಞಾನಿಯೊಬ್ಬರು "ವಿಜ್ಞಾನ ಎಂದರೆ ಅದೊಂದು ಗಂಭೀರ ಜಗತ್ತು. ಅಲ್ಲಿ ಹಾಸ್ಯಕ್ಕೆ ಅವಕಾಶವಿಲ್ಲ." ಎಂದು ಷರಾ ಬರೆದು ಕಳಿಸಿದ್ದರು. ವಿಜ್ಞಾನ ಎನ್ನುವುದು ಹಾಸ್ಯವೇ ಇಲ್ಲದ ಒಣ ಜಗತ್ತೇ? ಕುತೂಹಲದಿಂದ ಈ ಬಗ್ಗೆ ಅಧ್ಯಯನ ಮಾಡುತ್ತ ಹೋದ ಹಾಗೆ ವಿಶಿಷ್ಟ ಹಾಸ್ಯದ ಜಗತ್ತೇ ಎದುರಿಗೆ ತೆರೆದುಕೊಂಡಿತು. ಅದರ ಒಂದು ತುಣುಕನ್ನು ನಿಮಗೆ ಇಲ್ಲಿ ಉಣಬಡಿಸುತ್ತಿದ್ದೇವೆ. ಇದಕ್ಕೆ ಮೂರ್ಖರ ದಿನವನ್ನು ಆಚರಿಸುವ ಏಪ್ರಿಲ್ ಮಾಸಕ್ಕಿಂತ ಒಳ್ಳೆಯ ಸಂದರ್ಭ ಬೇರೆ ಇರಲಿಕ್ಕಿಲ್ಲ ಅಲ್ಲವೇ?

ಅಂದ ಹಾಗೆ ಈ ಮೂರ್ಖರ ದಿನದ ಆಚರಣೆ ಆರಂಭವಾಗಿದ್ದು ಹೇಗೆ ಗೊತ್ತೇ? ಗ್ರೀಕರು ಇದನ್ನು ಒಂದು ಹಬ್ಬವಾಗಿ ಸುಮಾರು ಎರಡು ಸಾವಿರ ವರುಷಗಳ ಹಿಂದೆ ಆಚರಿಸುತ್ತಿದ್ದರು ಎನ್ನುವ ಪ್ರತೀತಿ ಇದೆ. ಏಪ್ರಿಲ್ ಒಂದನೆಯ ತಾರೀಖು ಕಿಲಾಡಿಗಳು ಗೆಳೆಯರನ್ನೂ, ಪರಿಚಿತರು, ಅಪರಿಚಿತರನ್ನೂ ಕೀಟಲೆ ಮಾಡುವ ಪರಿಪಾಠ ಇದೆ. ಕೀಟಲೆ ಮಾಡಿದವರೂ, ಕೀಟಲೆಗೊಳಗಾದವರೂ ನಕ್ಕು ಮುಂದುವರೆಯುವುದು ಏಪ್ರಿಲ್ ಫೂಲ್ ಆಚರಣೆಯ ವಿಶೇಷ. ಇದರ ಮೊದಲ ಲಿಖಿತ ದಾಖಲೆ ವಿಜ್ಞಾನದ ಹೊತ್ತಿಗೆಯೊಂದರಲ್ಲಿ ಇದೆಯಂತೆ. ಆಗಸದಲ್ಲಿ ಕಾಣುವ ಕಾಮನಬಿಲ್ಲಿನಲ್ಲಿ ಹಲವು ಕಾಮನಬಿಲ್ಲುಗಳು ಇರುತ್ತವೆ ಎಂದು ಮೊದಲು ಹೇಳಿದ ಸ್ಕಾಟ್ ಎನ್ನುವ ಖಗೋಳಜ್ಞ ಇದನ್ನು ದಾಖಲಿಸಿದ್ದಾನೆ. ಕ್ರಿಸ್ತ ಶಕೆ 1125–1232ರ ಅವಧಿಯಲ್ಲಿ ಜೀವಿಸಿದ್ದ ಈತ ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲನ ವಿಚಾರಗಳನ್ನು ಲ್ಯಾಟಿನ್ ಭಾಷೆಗೆ ಅನುವಾದಿಸಿದ್ದ. ಜೊತೆಗೇ ಅರಿಸ್ಟಾಟಲನಂತೆಯೇ ಸಂಭಾಷಣೆಯ ರೂಪದಲ್ಲಿ ಖಗೋಳವಿಜ್ಞಾನದ ಕುರಿತು ಒಂದು ಹೊತ್ತಿಗೆಯನ್ನೂ ರಚಿಸಿದ್ದ. ಇದರಲ್ಲಿ ತತ್ವಜ್ಞಾನಿಯೊಬ್ಬ ತನ್ನ ಶಿಷ್ಯನಿಗೆ ಪಾಠ ಹೇಳುತ್ತಾನೆ. ಆ ಶಿಷ್ಯನ ಹೆಸರು? ಸರ್ ಲೂಪಸ್ ಫಿಯಟ್. ಇದು ಲ್ಯಾಟಿನ್ನಿನಲ್ಲಿ ಏಪ್ರಿಲ್ ಫೂಲ್ ಎನ್ನುವ ಪದದಲ್ಲಿನ ಅಕ್ಷರಗಳನ್ನು ಮರುಜೋಡಿಸಿ ಕಟ್ಟಿದ ಪದ. ಅರ್ಥಾತ್, ಆ ಶಿಷ್ಯನನ್ನು ಏಪ್ರಿಲ್ ಫೂಲ್ ಎಂದು ಸ್ಕಾಟ್ ಕರೆದಿದ್ದ.

ವಿಜ್ಞಾನಿಗಳ ಹಾಸ್ಯ ಗಂಭೀರವಾಗಿರುತ್ತದೆ ಎನ್ನುವುದಕ್ಕೆ ಇದು ಸಾಕ್ಷಿ. ಹಾಸ್ಯಪ್ರಜ್ಞೆ ಎಲ್ಲರಲ್ಲಿಯೂ ಇರಲೇ ಬೇಕಷ್ಟೆ. ಖಗೋಳವಿಜ್ಞಾನದ ಬಗ್ಗೆ ಧಾರ್ಮಿಕವಾಗಿ ಇದ್ದ ನಂಬಿಕೆಗಳು ತಪ್ಪು ಎಂದು ನಿರೂಪಿಸಿದ್ದಕ್ಕಾಗಿ ಗೆಲಿಲಿಯೋ ವಿಚಾರಣೆಗೊಳಗಾಗಿದ್ದು ಈಗ ಚರಿತ್ರೆ. ಪ್ರಾಣ ಉಳಿಸಿಕೊಳ್ಳಲು ತನ್ನ ವಿಚಾರಗಳು ತಪ್ಪು ಎಂದು ಹೇಳಿದರೂ, ಅದನ್ನು ಸಮರ್ಥಿಸಿಕೊಳ್ಳಲು ಗೆಲಿಲಿಯೋ ಹಾಸ್ಯದ ಮೊರೆ ಹೋಗಿದ್ದ. ಆತ ಬರೆದ ಹಲವು ಪದ್ಯಗಳಲ್ಲಿ ವಿಜ್ಞಾನಿಗಳೆನ್ನಿಸಿಕೊಂಡವರ ಇಬ್ಬಂದಿ ತನವನ್ನು ಗೇಲಿ ಮಾಡಿದ್ದ. "ಈ ಪ್ರಪಂಚದಲ್ಲಿ ನೆಟ್ಟಗೆ ಇರುವುದು ಪೀಸಾ ಗೋಪುರವಷ್ಟೆ, ಉಳಿದವೆಲ್ಲವೂ ಅತ್ತಿತ್ತ ವಾಲುತ್ತವೆ." ಎಂದು ವಿಜ್ಞಾನಿಗಳೆನ್ನಿಸಿಕೊಂಡವರಲ್ಲಿ ಇರುವ ಧಾರ್ಮಿಕ ಒಲವುಗಳನ್ನು ಕಿಚಾಯಿಸಿದ್ದ.

ವಿಜ್ಞಾನ ಜಗತ್ತಿನಲ್ಲಿ ಹಾಸ್ಯವನ್ನು ಮೂರು ಬಗೆಯಲ್ಲಿ ವಿಂಗಡಿಸಿದ್ದಾರೆ. ಎಲ್ಲ ಸಂಗತಿಗಳನ್ನೂ, ನಿರ್ದಿಷ್ಟ ವ್ಯತ್ಯಾಸ ಇಲ್ಲವೇ ಸಾಮ್ಯಗಳಿಂದ ವಿಂಗಡಿಸುವುದೇ ವಿಜ್ಞಾನವಲ್ಲವೇ? ಜೋಕುಗಳು ಹಾಗೂ ಹಾಸ್ಯವನ್ನೂ ಹೀಗೆಯೇ ವಿಂಗಡಿಸದಿದ್ದರೆ ವಿಜ್ಞಾನಿಗಳು ಹೇಗಾದಾರು? ರಷ್ಯಾದಲ್ಲಿ ಪ್ರಚಲಿತವಿದ್ದ ವಿಜ್ಞಾನ ಸಂಬಂಧಿ ಜೋಕುಗಳನ್ನು ಕ್ಸೇನಿಯ ಶಿಲಿಖಿನಾ ಎಂಬಾಕೆ ಮೂರು ಬಗೆಯಲ್ಲಿ ವಿಂಗಡಿಸಿದ್ದಾರೆ. ಮೊದಲನೆಯದನ್ನು ಇಂಟೆಲೆಕ್ಚುಯಲ್ ಅಥವಾ ಬೌದ್ಧಿಕ ಜೋಕುಗಳು; ಎರಡನೆಯದು ಗುರು–ಶಿಷ್ಯರ ಸಂಬಂಧಗಳನ್ನು ಕಿಚಾಯಿಸುವಂಥವು ಹಾಗೂ ಮೂರನೆಯವು ವಿಜ್ಞಾನ ಜಗತ್ತಿನ ಆಗುಹೋಗುಗಳನ್ನು ಲೇವಡಿ ಮಾಡುವ ಜೋಕುಗಳು. ಇವುಗಳಲ್ಲಿ ಇಂಟೆಲೆಕ್ಚುವಲ್ ಜೋಕುಗಳು ಆಯಾ ವಿಷಯವನ್ನು ಕೀಟಲೆ ಮಾಡುವಂಥವು. ಗುರು–ಶಿಷ್ಯರ ಜೋಕುಗಳು ವಿದ್ಯಾರ್ಥಿ ಮತ್ತು ಪ್ರೊಫೆಸರುಗಳ ನಡುವಣ ಸಂಘರ್ಷಗಳನ್ನು ಆಧರಿಸಿರುತ್ತವೆ. ಕೊನೆಯದು ವಿಜ್ಞಾನಿಗಳ ಜಗತ್ತಿನಲ್ಲಿ ನಡೆಯುವ ಘಟನೆಗಳನ್ನು ಆಧರಿಸಿದಂಥವು.

ಹೀಗೊಂದು ಜೋಕು.

ಒಮ್ಮೆ ಒಬ್ಬ ಗಣಿತಜ್ಞ, ಭೌತವಿಜ್ಞಾನಿ ಹಾಗೂ ಜೀವವಿಜ್ಞಾನಿ ಒಟ್ಟಿಗೇ ಕಾಲಹರಣ ಮಾಡುತ್ತಿದ್ದರಂತೆ. ಎದುರಿಗೆ ಒಂದು ಖಾಲಿ ಮನೆಯಿತ್ತು. ಇವರು ನೋಡುತ್ತಿದ್ದ ಹಾಗೆಯೇ ಅದರೊಳಗೆ ಇಬ್ಬರು ಹೋದರಂತೆ. ಸ್ವಲ್ಪ ಸಮಯದ ನಂತರ ಅದೇ ಮನೆಯಿಂದ ಮೂವರು ಹೊರಬಂದರಂತೆ.

## ಹಂಬಗ್ ಡಾರ್ವಿನ್

ಡಾರ್ವಿನ್ ಅತ್ಯುತ್ತಮ ಪ್ರಕೃತಿ ವಿಜ್ಞಾನಿಯಾಗಿದ್ದ. ಜಗತ್ತಿನಾದ್ಯಂತ ಪರ್ಯಟನೆ ಮಾಡಿ ವಿವಿಧ ದೇಶಗಳ ಜೀವಿಗಳನ್ನು ಗುರುತಿಸಬಲ್ಲನೆಂಬ ಖ್ಯಾತಿ ಪಡೆದಿದ್ದ. ಜೊತೆಗೆ ದುಂಬಿಗಳ ಸಂಗ್ರಹಣೆಯನ್ನೂ ಮಾಡುತ್ತಿದ್ದ. ಇಂತಹ ಅಜ್ಜನನ್ನು ಕೀಟಲೆ ಮಾಡಲು ಕೆಲವು ಹುಡುಗರು ಸಿದ್ಧರಾದರಂತೆ. ಹಲವು ಕೀಟಗಳನ್ನು ಹೆಕ್ಕಿ, ಒಂದರ ದೇಹಕ್ಕೆ ಬೇರೆ, ಬೇರೆ ಕೀಟಗಳ ರೆಕ್ಕೆ, ಕಾಲು, ಮೀಸೆಗಳನ್ನು ಅಂಟಿಸಿ, ವಿಚಿತ್ರ ದುಂಬಿಯೊಂದನ್ನು ತಯಾರಿಸಿದರಂತೆ. ಇದನ್ನು ಡಾರ್ವಿನ್ನನ ಬಳಿಗೆ ಕೊಂಡೊಯ್ದು, ಅದು ಯಾವ ಕೀಟ ಎಂದು ಗುರುತಿಸಲು ಹೇಳಿದರಂತೆ. ಡಾರ್ವಿನ್ ಅದಕ್ಕೆ ಏನಾದರೂ ಹೆಸರು ಹೇಳಿದರೆ ಫೂಲ್ ಎಂದು ಹೇಳುವ ಆಲೋಚನೆ ಅವರದ್ದು. ಆದರೆ ಅದನ್ನು ಕಂಡ ಕೂಡಲೇ ಅಂತಹ ಜೀವಿ ಇರಲು ಸಾಧ್ಯವಿಲ್ಲ ಎಂದು ಡಾರ್ವಿನ್ನನಿಗೆ ಹೊಳೆಯಿತು. ಆಗ ಆತ ಹೇಳಿದ್ದು.

"ಇದು ಹಂಬಗ್".

ಇಂಗ್ಲೀಷಿನಲ್ಲಿ ಬಗ್ ಎಂದರೆ ಕೀಟ. ಹಂಬಗ್ ಎಂದರೆ ಮೋಸ. ಈ ಪದಗಳ ತಮಾಷೆಯಾಟ ಮಾಡಿ ಡಾರ್ವಿನ್ನನನ್ನು ಒಂದೆಡೆ ಹೊಗಳುತ್ತಲೇ ಲೇವಡಿ ಮಾಡುವ ಜೋಕು ಇದು.



ಅದನ್ನು ಕಂಡ ಮೂವರೂ ಹೀಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರಂತೆ:

ಭೌತವಿಜ್ಞಾನಿ: "ಲೆಕ್ಕ ಎಲ್ಲೋ ತಪ್ಪಿದೆ. ಸರಿಯಾಗಿ ಎಣಿಸಬೇಕಿತ್ತು."

ಜೀವವಿಜ್ಞಾನಿ: "ಒಳಹೋದವರು ಸಂತಾನೋತ್ಪತ್ತಿ ಮಾಡಿರಬೇಕು. ಅದಕ್ಕೇ ಸಂಖ್ಯೆ ಹೆಚ್ಚಿದೆ."

ಗಣಿತಜ್ಞ: "ಈಗ ಒಬ್ಬರು ಒಳಗೆ ಹೋಗಬೇಕು. ಆಗಷ್ಟೆ ಮನೆ ಖಾಲಿ ಆಗಲು ಸಾಧ್ಯ."

ಇಲ್ಲಿ ಒಟ್ಟಿಗೇ ಮೂರು ಬಗೆಯ ಹಾಸ್ಯವನ್ನು ಕಾಣಬಹುದು. ಮೊದಲನೆಯದಾಗಿ, ವಿಜ್ಞಾನಿಗಳು ಹೇಗೆ ಒಂದೇ ವಿಷಯವನ್ನು ವಿಭಿನ್ನ ಬಗೆಯಲ್ಲಿ ನೋಡುತ್ತಾರೆ ಎನ್ನುವುದರ ವಿಡಂಬನೆ. ಎರಡನೆಯದಾಗಿ, ಗಣಿತಜ್ಞರ ವಿಚಿತ್ರ ಚಿಂತನೆಗಳ ಲೇವಡಿ. ಎರಡರಿಂದ ಮೂರನ್ನು ಕಳೆದರೆ ಮೈನಸ್ ಒಂದು ಇರುತ್ತದೆ. ಅದಕ್ಕೆ ಒಂದನ್ನು ಕೂಡಿದರೆ ಅದು ಶೂನ್ಯವಾಗುತ್ತದೆ ಎನ್ನುವ ತರ್ಕದ ಲೇವಡಿ. ಮೂರನೆಯದಾಗಿ,

ಅತ್ಯಂತ ಸಹಜ ವಿವರಣೆಗಳನ್ನೂ ವಿಜ್ಞಾನಿಗಳು ಕ್ಲಿಷ್ಟವಾಗಿಸಿಬಿಡುತ್ತಾರೆ ಎನ್ನುವ ಹಾಸ್ಯ.

ಅಂದ ಹಾಗೆ, ಜೋಕಿಗೂ, ಏಪ್ರಿಲ್ ಫೂಲ್ ಲೇವಡಿಗೂ ಸಂಬಂಧವೇನು ಎನ್ನಬೇಡಿ. ಏಪ್ರಿಲ್ ಫೂಲಿನ ದಿನ ಪ್ರಾಯೋಗಿಕವಾಗಿ ಯಾರನ್ನಾದರೂ ಮುಠ್ಠಾಳರನ್ನಾಗಿಸುತ್ತೇವಷ್ಟೆ. ಇಂತಹ ಲೇವಡಿಗಳು ವಿಜ್ಞಾನಿಗಳಿಗೆ ಹೊಸತೇನಲ್ಲ. ಪ್ರತಿ ವರ್ಷವೂ ಆರ್ಕೈವ್ ಆರ್ಗ್ ಎನ್ನುವ ಪತ್ರಿಕೆಯಲ್ಲಿ ಏಪ್ರಿಲ್ ಒಂದರಂದು ಹಲವು ಹೊಸ ಸಂಶೋಧನೆಗಳು ಪ್ರಕಟಣೆಯಾಗುತ್ತವೆ. ಇವನ್ನು ನೀವು ನಿಜ ಎಂದು ಭಾವಿಸುವಷ್ಟು ಗಂಭೀರವಾಗಿರುತ್ತವೆಯಾದರೂ, ಒಟ್ಟೊಟ್ಟಿಗೇ ನಮ್ಮಂತಹ ಮುಗ್ಧ ಓದುಗ‘ರು ಹಾಗೂ ಗಂಭೀರ ಸಂಶೋಧಕರುಗಳಿಬ್ಬರ ಕಾಲುಗಳನ್ನೂ ಎಳೆಯುತ್ತಿರುತ್ತವೆ.

ಎರಡು ವರ್ಷಗಳ ಹಿಂದೆ ಡೇವಿಡ್ ಎಂಸಿ ಮಾರ್ಶ್ ಹಾಗೂ ಜೆ. ಇ. ಡೇವಿಡ್ ಮಾರ್ಶ್ ಎಂಬಿಬ್ಬರು ಮಾರ್ಶ್ಲ್ಯಾಂಡ್ ಕಂಜೆಕ್ಚರ್ ಎಂಬ ತರ್ಕವನ್ನು ಪ್ರಕಟಿಸಿದ್ದರು. ಮಾರ್ಶ್ ಲ್ಯಾಂಡ್ ಅಥವಾ ಜೌಗುಪ್ರದೇಶಗಳು ಹುಟ್ಟುವುದಕ್ಕೂ, ಕ್ವಾಂಟಂ ಫಿಸಿಕ್ಸ್ ಮತ್ತು ಫ್ರಾಕ್ಟಲ್ ಎನ್ನುವ ಭೌತವಿಜ್ಞಾನದ ಇನ್ನೊಂದು ಅಧ್ಯಯನ ಕ್ಷೇತ್ರದ ನಿಯಮಗಳು ಕಾರಣ ಎಂದು ಹಲವು ಸೂತ್ರಗಳ ಮೂಲಕ ವಾದಿಸಿದ್ದರು. ಈ ಲೇಖನ ಪ್ರಕಟವಾಗಿದ್ದು ಏಪ್ರಿಲ್ ಒಂದರಂದು. ಅಷ್ಟೇ ಅಲ್ಲ. ಎರಡು ವಿಭಿನ್ನ ಹೆಸರಿನ ಲೇಖಕರು ವಾಸ್ತವವಾಗಿ ಒಬ್ಬನೇ ವ್ಯಕ್ತಿ ಎಂಬುದು ಅನಂತರ ಗೊತ್ತಾಯಿತು.

ಸುಪ್ರಸಿದ್ಧ ವಿಜ್ಞಾನ ಸಂವಹನಕಾರ, ನೋಬೆಲ್ ವಿಜೇತ ಭೌತವಿಜ್ಞಾನಿ ಜಾರ್ಜ್ ಗೇಮೋ ಸಾಮಾನ್ಯವೇನಲ್ಲ. ಗಂಭೀರ ಸಂಶೋಧನೆಯಲ್ಲಿ ಹೇಗೋ, ಕೀಟಲೆ ಮಾಡುವುದರಲ್ಲಿಯೂ ಆತನಿಗೆ ನೋಬೆಲ್ ಸಿಗಬೇಕು. ಒಮ್ಮೆ ಆತ ಸುಪ್ರಸಿದ್ಧ ನೇಚರ್ ಪತ್ರಿಕೆಗೆ ಒಂದು ಪ್ರಬಂಧವನ್ನು ಕಳಿಸಿದ್ದ. ಭೂಮಿಯ ಉತ್ತರಾರ್ಧದಲ್ಲಿ ಹಾಗೂ ದಕ್ಷಿಣಾರ್ಧದಲ್ಲಿ ದ್ರವಗಳ ಚಲನೆ ವಿರುದ್ಧ ದಿಕ್ಕಿನಲ್ಲಿ ಇರುತ್ತದೆ ಎನ್ನುವುದನ್ನು ವಿಡಂಬನೆ ಮಾಡಿ, ಉತ್ತರಾರ್ಧ ಗೋಳದಲ್ಲಿ ಗೋವುಗಳು ಪ್ರದಕ್ಷಿಣೆಯ ದಿಕಿನಲ್ಲಿಯೂ, ದಕ್ಷಿಣಾರ್ಧದಲ್ಲಿ ಗೋವುಗಳು ಅಪ್ರದಕ್ಷಿಣವಾಗಿಯೂ ಮೇವನ್ನು ಮೆಲುಕುತ್ತವೆ ಎಂದು ನಿರೂಪಿಸಿದ ಪ್ರಬಂಧ ಅದು. ಅದಕ್ಕೆ ದ್ರವಗಳ ಚಲನೆಗೆ ಕಾರಣವಾದ ಕೋರಿಯೋಲಿಸ್ ಬಲವೇ ಕಾರಣ ಎಂದು ಸಾಧಿಸಿದ್ದನಂತೆ. ಪುಣ್ಯವಶಾತ್, ಅದು ಪ್ರಕಟವಾಗಲಿಲ್ಲ. ಅಥವಾ ದುರದೃಷ್ಟವಶಾತ್ ಎನ್ನೋಣವೇ?

ಏಪ್ರಿಲ್ ಅಲ್ಲದ ಸಮಯದಲ್ಲಿಯೂ ಇಂತಹ ಕಿಲಾಡಿ ಕೀಟಲೆಗಳನ್ನು ವಿಜ್ಞಾನಿಗಳು ಮಾಡಿದ್ದುಂಟು. ಆರ್ಥರ್ ಎಡಿಂಗ್ಟನ್ ಕೂಡ ಒಬ್ಬ ನೋಬೆಲ್ ವಿಜೇತ ಇಂಗ್ಲೀಷ್ ವಿಜ್ಞಾನಿ. ಭಾರತೀಯ ಸಂಜಾತ ನೋಬೆಲ್ ವಿಜೇತ ಎಸ್. ಚಂದ್ರಶೇಖರರ ಗುರುವಾಗಿದ್ದವ. ಈತ ಒಮ್ಮೆ ಬರೆದ ಒಂದು ಪ್ರಬಂಧವನ್ನು ಲೇವಡಿ ಮಾಡಿ ಹ್ಯಾನ್ಸ್ ಬೆಥೆ ಮತ್ತು ಸಂಗಡಿಗರು ಒಂದು ಪ್ರಬಂಧವನ್ನು ಬರೆದರು. ಗಣಿತದಲ್ಲಿನ ಸೂತ್ರಗಳನ್ನು ವಿವರಿಸುತ್ತಾ, ಅದರಲ್ಲಿರುವ ಡಿಗ್ರೀ ಎನ್ನುವ ಪದವನ್ನೇ ಹಿಡಿದುಕೊಂಡು ಉಷ್ಣತೆಯ ಮಾನವಾದ ಡಿಗ್ರೀಗೆ ಹೋಲಿಸಿದ್ದರು. ಹೀಗೆ ಎರಡು ಸಂಬಂಧವೇ ಇಲ್ಲದ ಪ್ರಮಾಣಗಳನ್ನು ಹೋಲಿಸುವುದು ಸಾಧ್ಯವೇ ಇಲ್ಲ. ಆದರೂ ಅದು ನಿಜವೇನೋ ಎನ್ನುವಂತೆ ಮಾಡಿ ಪ್ರಬಂಧ ಬರೆದು ಕಳಿಸಿದ್ದರು. ಅದು ಅಂದಿನ ಕಾಲದಲ್ಲಿ ಸುಪ್ರಸಿದ್ಧವಾಗಿದ್ದ ಜರ್ಮನ್ ಪತ್ರಿಕೆಯಲ್ಲಿ ಪ್ರಕಟವೂ ಆಗಿ–ತ್ತು. ತದನಂತರ ಇದು ಲೇವಡಿ ಎಂದು ತಿಳಿದಾಗ ಪತ್ರಿಕೆಯ ಸಂಪಾದಕನಾದ ಹ್ಯಾನ್ಸ್ ಸ್ಪೀಮನ್ ಪ್ರಬಂಧವನ್ನು ಹಿಂಪಡೆಯಲು ಆದೇಶಿಸಿದ್ದರು. ಆಗ ಬೆಥೆ ಗೆಳೆಯರು ಬರೆದದ್ದು ಹೀಗೆ: “ಈ ಪ್ರಬಂಧ ತಾತ್ವಿಕ ಭೌತವಿಜ್ಞಾನ ಎಂಬ ಹೆಸರಿನಲ್ಲಿ ಕೇವಲ ಊಹೆಯಿಂದ ಹಾಗೂ ಕೆಲವು ಅಂಕಿಗಳ ಸಾಮ್ಯತೆಯನ್ನಷ್ಟೆ ಗಮನದಲ್ಲಿಟ್ಟುಕೊಂಡು ಮಾಡುವ ತರ್ಕಗಳನ್ನು ಲೇವಡಿ ಮಾಡುವ ಉದ್ದೇಶದಿಂದ ಬರೆದಿದ್ದು. ?ಇದನ್ನು ಬರೆದ ಸೂತ್ರಗಳು ತಪ್ಪುದಾರಿಯಲ್ಲಿ ಕೊಂಡೊಯ್ಯುವುದಕ್ಕೆ ತಕ್ಕುದಾಗಿದ್ದುವು? ಎಂಬುದಕ್ಕೆ ವಿಷಾದವಿದೆ,” ಎಂದು ಬರೆದಿದ್ದರಂತೆ.

ಗೇಮೋ ವಿಜ್ಞಾನ ವಿಚಾರಗಳನ್ನು ಸುಲಲಿತವಾಗಿ ತಿಳಿಸುವುದರಲ್ಲಿ ಅಗ್ರಗಣ್ಯ. ಸುಪ್ರಸಿದ್ಧ ಶಿಶುಗೀತೆಯನ್ನು ಈತ ಹೊಸದಾಗಿ ಸಂಶೋಧಿಸಿದ ಕ್ವಾಸಾರುಗಳಿಗೆ ಅನ್ವಯಿಸಿ ಬರೆದ ಗೀತೆ ಓದಿ.

Twinkle, twinkle, quasi-star,
Biggest puzzle from afar.
How unlike the other ones,
Brighter than a billion suns.
Twinkle, twinkle, quasi-star,
How I wonder what you are.

ನಾವು ಲೀಟರ್ ಎಂದು ಕರೆಯುವ ಮಾನಕದ ಹೆಸರು ಹಾಗೇಕಿದೆ ಗೊತ್ತೇ? ಇದು 1716–1778ರ ಅವಧಿಯಲ್ಲಿ ಬದುಕಿದ್ದ ಒಬ್ಬ ಮದ್ಯಸಾರದ ಬಾಟಲಿ ತಯಾರಕನ ಮಗನ ಹೆಸರಿನಿಂದ ಬಂದಿದ್ದು. ಕ್ಲಾಡ ಎಮಿಲಿ ಜೀನ್ ಬಾಪ್ಟಿಸ್ಟ್ ಲಿಟರ್ ಎಂಬುದು ಆತನ ಹೆಸರು. ಈತ ಬಾಟಲಿಗಳ ಜೊತೆಗೇ ನಿಖರವಾಗಿ ಅಳೆಯುವ ಸಾಧನಗಳನ್ನೂ ತಯಾರಿಸುತ್ತಿದ್ದನಾಗಿ ಆತನ ಹೆಸರನ್ನು ಅಂತರರಾಷ್ಟ್ರೀಯ ಮಾನಕಗಳ ಸಂಸ್ಥೆ ದ್ರವಗಳನ್ನು ಅಳೆಯುವ ಮಾನಕವಾಗಿ ಬಳಸುತ್ತಿದೆ.

ಇದನ್ನು ನಂಬಿಬಿಟ್ಟಿರಾ? ಏಪ್ರಿಲ್ ಫೂಲ್!!! ವಾಸ್ತವವಾಗಿ ಲೀಟರ್ ಮಾನಕವನ್ನು ನಮೂದಿಸಲು ಇಂಗ್ಲೀಷಿನ ‘ಎಲ್’ ಸಣ್ಣಕ್ಷರದ (l) ಬದಲಿಗೆ ‘ಎಲ್’ ದೊಡ್ಡಕ್ಷರವನ್ನು ಬಳಸುತ್ತಾರೆ. ಕಾರಣ ಮುದ್ರಣ ರಾಕ್ಷಸ ಇದರ ಬದಲಿಗೆ 1 ಬಳಸುವ ಸಾಧ್ಯತೆಗಳು ಹೆಚ್ಚು. ಹೀಗಾಗಿ ಇದೊಂದು ಅಳತೆಗೆ ಮಾತ್ರ ಐ ಎಂದು ದೊಡ್ಡಕ್ಷರವನ್ನು ಬಳಸುತ್ತಾರೆ. ಇದನ್ನೇ ಲೇವಡಿ ಮಾಡಿ ಒಬ್ಬ ಫಿಸಿಕ್ಸ್ ಶಿಕ್ಷಕ ಹೀಗೊಂದು ಕಥೆ ಕಟ್ಟಿದ್ದ. ಅಷ್ಟೇ ಅಲ್ಲ. ಈ ಮದ್ಯಸಾರ ಬಾಟಲಿ ತಯಾರಕನ ಮಗನ

## ಐನ್‌ಸ್ಟೀನ್ ಮತ್ತು ಬೆಕ್ಕು

ಐನ್‌ಸ್ಟೀನರ ಬಳಿ ಒಂದು ಬೆಕ್ಕು ಇತ್ತಂತೆ. ಹೆಣ್ಣು ಬೆಕ್ಕು. ಅದು ಮನೆಯೊಳಗೆ ಹೋಗಿ, ಬರಲೆಂದು ಬಾಗಿಲಲ್ಲಿ ಒಂದು ಕಿಂಡಿ ಮಾಡಿದ್ದರಂತೆ. ಬೆಕ್ಕು ಮರಿ ಹಾಕಿದಾಗ, ಆ ಕಿಂಡಿಯ ಪಕ್ಕದಲ್ಲಿ ಇನ್ನೊಂದು ಕಿಂಡಿ ಕೊರೆಸಿದರಂತೆ. ಏಕೆ ಎಂದು ಕೇಳಿದರೆ, ದೊಡ್ಡ ಬೆಕ್ಕಿಗೆ ದೊಡ್ಡ ಕಿಂಡಿ, ಮರಿಗೆ ಮರಿಕಿಂಡಿ ಎಂದರಂತೆ.



**ಸುಪ್ರಸಿದ್ಧ ನೇಚರ್ ಪತ್ರಿಕೆ ಕೆಲವು ವರ್ಷಗಳ ಹಿಂದೆ ಡೀಡಾಲಸ್ ಎನ್ನುವ ಅಂಕಣವನ್ನು ಪ್ರಕಟಿಸುತ್ತಿತ್ತು. ಇದು ಸಂಪೂರ್ಣ ಊಹಾಪೋಹದ ಅಂಕಣ. ಆದರೆ ಹೊಸ ತಂತ್ರಜ್ಞಾನಗಳ ಅರಿವೆ ಹೊದ್ದಿರುತ್ತಿತ್ತು.**

ಜೀವನಚರಿತ್ರೆಯನ್ನೂ ಕೂಲಂಕಷವಾಗಿ ಸೃಷ್ಟಿಸಿ, ಬರೆದು ಬಿಟ್ಟಿದ್ದ. ಆತನ ಬಗ್ಗೆ ಹೆಚ್ಚು ದಾಖಲೆಗಳು ಇಲ್ಲದ್ದರಿಂದ, ಕೆಲವು ವಿವರಗಳನ್ನು ಖಾಲಿ ಬಿಡಲಾಗಿದೆ ಎಂದೂ ಹೇಳಿ ಒಂದು ಪತ್ರಿಕೆಯಲ್ಲಿ ಏಪ್ರಿಲ್ ಒಂದರಂದು ಪ್ರಕಟಿಸಿ ಬಿಟ್ಟಿದ್ದ. ಪುಣ್ಯಕ್ಕೆ ಇದು ಏಪ್ರಿಲ್ ಫೂಲ್ ಕೀಟಲೆ ಎಂದು ತಿಳಿದ ವಿಜ್ಞಾನಿಗಳು ಹಲವರು ಆತನ ಜೊತೆಗೆ ಕೈಗೂಡಿಸಿ, ಬಿಟ್ಟ ಜಾಗೆಗಳನ್ನು ಭರ್ತಿ ಮಾಡಿದ್ದರಂತೆ. ಲೀಟರಿಗೆ ಮಿಲೀ ಎಂಬ ಮಗಳಿದ್ದಳು ಎಂದು ಕಥೆ ಸೃಷ್ಟಿಸಿದರಂತೆ. ಇಲ್ಲದೇ ಇದ್ದ ವ್ಯಕ್ತಿಯನ್ನು ಸೃಷ್ಟಿಸಿ ಏಪ್ರಿಲ್ ಜೋಕು ಮಾಡಿದ ಘಟನೆ ನಡೆದಿದ್ದು 1978ರಲ್ಲಿ.

ಮಾಧ್ಯಮಗಳು ನಮ್ಮನ್ನು ಮೂರ್ಖರನ್ನಾಗಿಸುವಂತೆಯೇ, ವಿಜ್ಞಾನಿಗಳೂ ಮಾಧ್ಯಮಗಳನ್ನು ಏಪ್ರಿಲ್ ಫೂಲ್ ಮಾಡಿದ್ದಿದೆ. 1923ರಲ್ಲಿ ವಿದ್ಯುಚ್ಛಕ್ತಿ ಇನ್ನೂ ಹೊಸ ಅನ್ವೇಷಣೆಯಾಗಿದ್ದ ಸಮಯದಲ್ಲಿ ಗಾಳಿಯಿಂದಲೇ ವಿದ್ಯುತ್ತನ್ನು ತಯಾರಿಸಬಹುದು ಎಂದು ಏಪ್ರಿಲ್ ಒಂದರ ಸಂಚಿಕೆಯಲ್ಲಿ ಜರ್ಮನ್ ಪತ್ರಿಕೆಯೊಂದು ಪ್ರಕಟಿಸಿತ್ತು. ಇದನ್ನು ನಿಜವೆಂದೇ ತಿಳಿದ ಸುಪ್ರಸಿದ್ಧ ಪತ್ರಿಕೆಗಳಾದ ಲಾಸ್ ಏಂಜಲೀಸ್ ನ್ಯೂಸ್, ನ್ಯೂಯಾರ್ಕ್ ಟೈಂಸ್ ಪತ್ರಿಕೆಗಳು ಆ ಬಗ್ಗೆ ಸುದ್ದಿಯನ್ನು ಪ್ರಕಟಿಸಿ, ಮುಜುಗರ ಅನುಭವಿಸಿದ್ದುವು. ಅಂದ ಹಾಗೆ ವಿದೇಶಗಳಲ್ಲಿ ಮಾತ್ರ ಇದು ನಡೆಯುವುದಲ್ಲ. ಭಾರತದಲ್ಲಿಯೂ ಇದು ನಡೆದಿದ್ದಿದೆ.

ಸುಪ್ರಸಿದ್ಧ ನೇಚರ್ ಪತ್ರಿಕೆ ಕೆಲವು ವರ್ಷಗಳ ಹಿಂದೆ ಡೀಡಾಲಸ್ ಎನ್ನುವ ಅಂಕಣವನ್ನು ಪ್ರಕಟಿಸುತ್ತಿತ್ತು. ಇದು ಸಂಪೂರ್ಣ ಊಹಾಪೋಹದ ಅಂಕಣ. ಆದರೆ ಹೊಸ ತಂತ್ರಜ್ಞಾನಗಳ ಅರಿವೆ ಹೊದ್ದಿರುತ್ತಿತ್ತು. ಇದು ಹಾಸ್ಯ ಎಂದು ಅರಿಯದ ಸುಪ್ರಸಿದ್ಧ ಭಾರತೀಯ ಪತ್ರಿಕೆಯೊಂದು ಅದರಲ್ಲಿ ಪ್ರಕಟವಾಗಿದ್ದ ಲೇಖನವೊಂದನ್ನು ಆಧರಿಸಿ ಸುದ್ದಿಯನ್ನು ಪ್ರಕಟಿಸಿತ್ತು. ವಿಜ್ಞಾನಿಗಳ ಹಾಸ್ಯವನ್ನು ಅರ್ಥ ಮಾಡಿಕೊಳ್ಳುವುದೂ ಕಷ್ಟ ಅಲ್ಲವೇ. ವಿಜ್ಞಾನಿಗಳ ಭಾಷೆಯ ಸ್ವರೂಪವೇ ಹೀಗೆ. ಅವರ ಜೋಕು ಕೂಡ ಕಬ್ಬಿಣದ ಕಡಲೆ ಎನ್ನುವುದಕ್ಕೆ ಉದಾಹರಣೆ ಈ ಸಂಚಿಕೆಯಲ್ಲಿಯೇ ಇನ್ನೊಂದು ಲೇಖನದಲ್ಲಿದೆ.

ವಿಡಂಬನೆ, ಲೇವಡಿ ವಿಜ್ಞಾನ ಜಗತ್ತಿನಲ್ಲಿ ಬಲು ಸಾಮಾನ್ಯ. ಯಾರಾದರೂ ಮುಠ್ಠಾಳತನ ತೋರಿದರೆ "ನೀನೇನು ಐನ್ ಸ್ಟೀನೋ" ಎಂದು ಲೇವಡಿ ಮಾಡುವುದುಂಟು. ಪಾಪ. ಐನ್‌ಸ್ಟೀನ್! ಇಪ್ಪತ್ತನೆಯ ಶತಮಾನದ ಜೀನಿಯಸ್ ಅನ್ನಿಸಿಕೊಂಡರೂ, ಮುಠ್ಠಾಳತನಕ್ಕೆ ಅವರ ಹೆಸರು ರೂಪಕವಾಗಿರುವುದು ಜೋಕ್ ಅಲ್ಲವೇ? ಇರಲಿ. ಇತ್ತೀಚೆಗೆ ನಮ್ಮ ಭಾರತೀಯ ವಿಜ್ಞಾನ ಪರಂಪರೆಯ ಬಗ್ಗೆ ನಮಗೆಲ್ಲ ಸಾಕಷ್ಟು ಹೆಮ್ಮೆ ಹುಟ್ಟಿದೆ. ಪೈಥಾಗೋರಸನ ನಿಯಮವೂ ನಮ್ಮ ಪೂರ್ವಜರಿಗೆ ಗೊತ್ತಿತ್ತು. ಗುರುತ್ವಾಕರ್ಷಣೆಯ ನಿಯಮವನ್ನು ಪತ್ತೆ ಮಾಡಿದ್ದು ನ್ಯೂಟನ್ ಅಲ್ಲ. ನಮ್ಮೂರವರೇ! ಭಾಸ್ಕರಾಚಾರ್ಯ ಅಂತೆಲ್ಲ ಹೆಮ್ಮೆ ಹುಟ್ಟಿದೆ.

ವಾಸ್ತವವಾಗಿ ಸುಪ್ರಸಿದ್ಧ ಖಭೌತವಿಜ್ಞಾನಿ ಜಯಂತ್ ನಾರ್ಲೀಕರ್ ಅವರು ನಮ್ಮ ದೇಶದಲ್ಲಿ ಗುರುತ್ವಾಕರ್ಷಣೆಯ ತತ್ವವನ್ನು ಒಬ್ಬ ಕೇರಳೀಯ ಪತ್ತೆ ಮಾಡಿದ್ದ ಎಂದು ಸಂಶೋಧನೆ ಮಾಡಿ ಕರೆಂಟ್ ಸೈನ್ಸ್ ಪತ್ರಿಕೆಯಲ್ಲಿ ಪ್ರಕಟಿಸಿದ್ದರು. ಆದರೆ ಪಾಪ ಆತ ಅನಾಮಧೇಯನಾಗಿಯೇ ಸತ್ತನಂತೆ. ಕಾರಣ: ನ್ಯೂಟನ್ನನಿಗೆ ಗುರುತ್ವಾಕರ್ಷಣೆಯ ಜ್ಞಾನ ಉದಯಿಸಿದ್ದು ಸೇಬಿನ ಮರದ ಕೆಳಗೆ, ಸೇಬು ಕೆಳಗೆ ಬೀಳುವುದನ್ನು ಕಂಡಷ್ಟೆ. ಹಾಗೆಯೇ, ಕೇರಳೀಯನಿಗೆ ಆಗಿತ್ತು. ಇನ್ನೂ ಹಿಂದೆ. ಆದರೆ ಕೇರಳದಲ್ಲಿ ಸೇಬು ಬೆಳೆಯುವುದಿಲ್ಲವಲ್ಲ! ಅಲ್ಲಿ ಬೆಳೆಯುವುದು ತೆಂಗು. ಅವ ಆ ಮರದ ಕೆಳಗೆ ಕುಳಿತಿದ್ದ. ತನ್ನ ಶೋಧವನ್ನು ಜಗತ್ತಿಗೆ ತಿಳಿಸುವುದಕ್ಕೂ ಅವನಿಗೆ ಅವಕಾಶ ದೊರಕಲಿಲ್ಲ!

ಇದು ನಾರ್ಲೀಕರ್ ಖಭೌತವಿಜ್ಞಾನಿಗಳಲ್ಲಿ ಅದರಲ್ಲೂ ಪ್ರಾಯೋಗಿಕ ಹಾಗೂ ತಾತ್ವಿಕ ಭೌತವಿಜ್ಞಾನಿಗಳ ನಡುವೆ ನಡೆಯುವ ನಾಮೇಲು, ತಾಮೇಲು ಹಗ್ಗ ಜಗ್ಗಾಟದ ಬಗ್ಗೆ ವ್ಯಂಗ್ಯವಾಡಿ ಬರೆದಿದ್ದ ಜೋಕು. ವಿಜ್ಞಾನಿಗಳ ಬಗ್ಗೆ ಇರುವ ಜೋಕಿನ ಪ್ರಮಾಣವನ್ನು ಕುರಿತು ಹೀಗೊಂದು ಸೂತ್ರ ಬರೆದರೂ ತಪ್ಪಿಲ್ಲ.

ಜೋಕುಗಳ ಸಂಖ್ಯೆ= ವಿಜ್ಞಾನಿಯ ಜನಪ್ರಿಯತೆ x ವಿಜ್ಞಾನ ಶಾಖೆ

ವಿಜ್ಞಾನಿಯ ಜನಪ್ರಿಯತೆ ಹೆಚ್ಚಿದಷ್ಟೂ, ಜೋಕುಗಳ ಸರಕಾಗುವುದೂ ಹೆಚ್ಚು. ಹಾಗೆಯೇ, ಭೌತವಿಜ್ಞಾನಿಗಳನ್ನು ಗೇಲಿ ಮಾಡುವ ಜೋಕುಗಳಷ್ಟು ಇತರೆ ವಿಷಯಗಳ ವಿಜ್ಞಾನಿಗಳನ್ನು ಮಾಡುವುದು ಕಡಿಮೆ.

ಒಟ್ಟಾರೆ ವಿಜ್ಞಾನ ಲೋಕವೆನ್ನುವುದು ಹೇಗೆ ನಿಗೂಢವೋ, ಹಾಗೆಯೇ ಅಲ್ಲಿನ ಹಾಸ್ಯ, ಜೋಕುಗಳ ಪ್ರಪಂಚವೂ ಅರ್ಥವಾಗದ್ದು.

*ಕೊಳ್ಳೇಗಾಲ ಶರ್ಮ. ಕುತೂಹಲಿಯ ಸಂಪಾದಕರು*

## ಐನ್‌ಸ್ಟೀನ್‌ರ ಡ್ರೈವರು ಭಾಷಣ ಮಾಡಿದ್ದು

ಐನ್‌ಸ್ಟೀನರ ಪ್ರಸಿದ್ಧಿಯ ಬಗ್ಗೆ ಈ ಜೋಕು. ಇದು ನಿಜವೋ ಸುಳ್ಳೋ ಹೇಳಿದವರಿಲ್ಲ. ಐನ್ ಸ್ಟೀನ್ ನೋಬೆಲ್ ಪ್ರಶಸ್ತಿ ಗಳಿಸಿದ ನಂತರ ಅವರ ಸಾಪೇಕ್ಷ ಸಿದ್ಧಾಂತದ ಬಗ್ಗೆ ಭಾಷಣ ಕೊಡಲು ಬೇರೆ, ಬೇರೆ ಕಡೆಗೆ ಹೋಗಬೇಕಿತ್ತು. ಆಗೆಲ್ಲ ಅವರ ಡ್ರೈವರೂ ಜೊತೆಗೆ ಇರುತ್ತಿದ್ದ. ಹಾಲಿನ ಕೊನೆಯಲ್ಲಿ ಕುಳಿತಿರುತ್ತಿದ್ದ. ಒಮ್ಮೆ ಅವನು ಐನ್ ಸ್ಟೀನರಿಗೆ ಅದೇನು ಭಾಷಣ ಕೊಡುತ್ತೀರೋ, ಬಹಳ ಸುಲಭ. ಕೇಳಿ, ಕೇಳಿ ನನಗೂ ಬಾಯಿಪಾಠ ಆಗಿಬಿಟ್ಟಿದೆ. ನಾನೇ ಮಾಡಬಲ್ಲೆ ಎಂದನಂತೆ.

ಮತ್ತೊಂದು ಭಾಷಣಕ್ಕೆ ಹೋದಾಗ, ಅಲ್ಲಿದ್ದವರಿಗೆ ಐನ್‌ಸ್ಟೀನರ ಪರಿಚಯ ಇರಲಿಲ್ಲವಾದ್ದರಿಂದ, ಅವರು ತಮ್ಮ ಡ್ರೈವರನನ್ನೇ ಭಾಷಣ ಮಾಡಲು ಕಳಿಸಿದರಂತೆ. ವೇದಿಕೆಗೆ ಹೋದ ಆತ ಬಾಯಿಪಾಠವನ್ನು ಚೆನ್ನಾಗಿ ಒಪ್ಪಿಸಿದ. ಆದರೆ ಅನಂತರ ಪ್ರಶ್ನೆಗಳನ್ನು ಕೇಳಲು ಆರಂಭಿಸಿದಾಗ, ಉತ್ತರ ಹೇಳಲು ತೋಚದೆ, "ಅಯ್ಯೋ. ಈ ಪ್ರಶ್ನೆಗೆ ಉತ್ತರ ಬಹಳ ಸುಲಭ. ನನ್ನ ಡ್ರೈವರೇ ಅದಕ್ಕೆ ಉತ್ತರ ಹೇಳಿ ಬಿಡಬಲ್ಲ." ಎಂದು ಹೇಳಿ ಐನ್‌ಸ್ಟೀನರತ್ತ ಕೈ ತೋರಿಸಿದನಂತೆ.










# ನಗೆ ಉಕ್ಕಿಸುವ ಧನ್ಯವಾದಗಳು

**ಯಾವುದೇ ಕಾರ್ಯಕ್ರಮದಲ್ಲಿಯೂ ವಂದನಾರ್ಪಣೆ ಎನ್ನುವುದು ಅತ್ಯಂತ ನೀರಸ ಅಂಶ. ಪ್ರಬಂಧಗಳಲ್ಲಿ ಕಾಣುವ ಕೃತಜ್ಞತೆಗಳೂ ಅಷ್ಟೆ. ಅಂತಹವನ್ನೂ ರಮ್ಯವಾಗಿಸುವ ಉದಾಹರಣೆಗಳು ಇಲ್ಲಿವೆ.**







ಹಾಸ್ಯ ಉಕ್ಕುವುದು ಅನಿರೀಕ್ಷಿತ ಸಂದರ್ಭಗಳಲ್ಲಿ ಎನ್ನುವುದು ಗೊತ್ತಷ್ಟೆ. ಅನಿರೀಕ್ಷಿತಗಳು ಆಗುವುದಕ್ಕೆ ಇಂತಹುದೇ ಸಂದರ್ಭ ಅಂತೇನಿಲ್ಲವಲ್ಲ. ಮಸಣದಲ್ಲಿಯೂ ನಗೆಪಾಟಲಿಗೆ ಈಡು ಮಾಡುವ ಅನಿರೀಕ್ಷಿತಗಳು ಸಂಭವಿಸುವಾಗ, ವಿಜ್ಞಾನ ಲೋಕದಲ್ಲಿ ಘಟಿಸಬಾರದು ಅಂತ ನಿಯಮವೇನೂ ಇಲ್ಲವಲ್ಲ. ಅದಕ್ಕೇ ಏನೋ ಋಣ ತೀರಿಸುವ ಅತಿ ಸಾಮಾನ್ಯವಾದ ಸಂದರ್ಭಗಳಲ್ಲಿಯೂ ನಗು ಉಕ್ಕಿಸುವಂಥ ಉದಾಹರಣೆಗಳನ್ನು ಕಾಣಬಹುದು. ವಿಜ್ಞಾನ ಪ್ರಬಂಧಗಳಲ್ಲಿ ಅಂತಹ ಕೆಲವು ನಗೆಪಾಟಲಿನವಲ್ಲದಿದ್ದರೂ, ಮುಗುಳ್ನಗೆಯನ್ನು ತರಿಸುವ ಕೃತಜ್ಞತೆಯ ಉಲ್ಲೇಖಗಳು ಬಹಳಷ್ಟು ಇವೆ.

ವಿಜ್ಞಾನ ಪ್ರಬಂಧಗಳ ಚೌಕಟ್ಟು ಇಕ್ಕಟ್ಟಿನದ್ದು ಎನ್ನಬಹುದು. ವೈವಿಧ್ಯಕ್ಕೆ ಅವುಗಳಲ್ಲಿ ಅವಕಾಶವೇ ಕಡಿಮೆ. ಮೊದಲಿಗೆ ವಿಷಯವನ್ನು ಪರಿಚಯಿಸುವ ಹಾಗೂ ಆ ಸಂಶೋಧನೆ ಏಕೆ ಬೇಕಿತ್ತು ಎನ್ನುವ ಒಂದು ಪ್ರಸ್ತಾವನೆ, ಅನಂತರ ಸಂಶೋಧನೆಗೆ ಬಳಸಿದ ವಿವಿಧ ವಿಧಾನಗಳ, ಸಾಧನ–ಪರಿಕರಗಳ ವಿವರಣೆ, ತದನಂತರಪ್ರಯೋಗಗಳಲ್ಲಿ ಕಂಡುಬಂದ ಫಲಿತಾಂಶಗಳ ಪಟ್ಟಿ, ಆ ಫಲಿತಾಂಶಗಳನ್ನು ಕುರಿತ ವಿಶ್ಲೇಷಣೆ, ವಿವರಣೆ. ಇದಾದ ನಂತರ ಕೊನೆಯಲ್ಲಿ ಪುಟ್ಟದಾಗಿ ಸಂಶೋಧನೆಗೆ ನೆರವಾದವರಿಗೆ ಒಂದೆರಡು ವಾಕ್ಯಗಳಲ್ಲಿ ಕೃತಜ್ಞತೆಗಳು ಹಾಗೂ ಕೊನೆಗೆ ಲೇಖ–ಕರ ವಿಳಾಸ, ಚುಟುಕು ವಿವರ. ನೊಬೆಲ್ ಪ್ರಶಸ್ತಿ ಪಡೆದ ವಿಜ್ಞಾನಿಯ ಪ್ರಬಂಧದಲ್ಲಿಯೂ ಇದೇ ಚೌಕಟ್ಟು ಇರುತ್ತದೆ.

ಈ ಕೃತಜ್ಞತೆ ಎನ್ನುವ ಅಂಶಕ್ಕೆ ವಿಜ್ಞಾನ ಲೋಕದಲ್ಲಿ ಬಹಳಷ್ಟು ಪ್ರಾಮುಖ್ಯತೆ ಇದೆ. ಪ್ರಬಂಧದಲ್ಲಿ ಕರ್ತೃವನ್ನಾಗಿ ಸೇರಿಸಿಕೊಳ್ಳಲು ಆಗದವರನ್ನೆಲ್ಲ ಇಲ್ಲಿ ನೆನಪಿಸಿಕೊಳ್ಳಬೇಕೆನ್ನುವ ಅಲಿಖಿತ ನಿಯಮ ಇದೆ. ಹಾಂ. ಸಂಶೋಧನೆಯಲ್ಲಿ ಪಾಲ್ಗೊಂಡಿದ್ದಾರೋ ಇಲ್ಲವೋ, ಕೊಡುಗೆ ನೀಡಿದ್ದಾರೋ ಇಲ್ಲವೋ, ಆದರೆ ಅಧಿಕಾರದ ಗಾದಿಯ ಮೇಲೆ ಕುಳಿತಿರುವ ಪ್ರೊಫೆಸರುಗಳ ಹೆಸರು ಕರ್ತೃಗಳ ಜೊತೆಗೇ ಇರುವುದರಿಂದ ಅವರನ್ನು ಕೃತಜ್ಞತೆಯ ಭಾಗದಲ್ಲಿ ಕಾಣವುದು ಅಪರೂಪ.

ವಿಜ್ಞಾನದ ಭಾಷೆ ವಸ್ತುನಿಷ್ಠ ಎನ್ನುವ ಒಣ ಭಾಷೆ. ಇನ್ನೊಬ್ಬರ ಋಣ ತೀರಿಸುವ ಕೃತಜ್ಞತೆ ಎನ್ನುವ ಭಾಗದಲ್ಲಿಯೂ ಭಾವ ಒಸರುವುದಿಲ್ಲ. ಅಷ್ಟು ಕಠಿಣ ಚೌಕಟ್ಟು. ಇಂತಹ ಚೌಕಟ್ಟನ್ನು ಮೀರಿದ ಪ್ರಬಂಧಗಳೂ ಇವೆ. ಕೆಲವು ವರ್ಷಗಳ ಹಿಂದೆ ಚೀನಾದ ಹುವಾಂಗ್ ವಿಜ್ಞಾನ ಮತ್ತು ತಂತ್ರಜ್ಞಾನ ವಿವಿಯ ಇಂಜಿನೀಯರಿಂಗ್ ವಿದ್ಯಾರ್ಥಿ ರೂಯಿ ಲಾಂಗ್ ಬರೆದ ಪ್ರಬಂಧವೊಂದು ಹೀಗೆ ಸುದ್ದಿ ಮಾಡಿತ್ತು. ರೆಫ್ರಿಜರೇಟರುಗಳ ತಣಿಸುವ ಸಾಮರ್ಥ್ಯದ ಮಿತಿಯನ್ನು ವಿಶ್ಲೇಷಿಸಿ ಈತ ಪ್ರಬಂಧ ಬರೆದಿದ್ದ. ಕೊನೆಯಲ್ಲಿ ಕೃತಜ್ಞತೆಗಳನ್ನು ಅರ್ಪಿಸುವ ಭಾಗದಲ್ಲಿ , "ನಾನು ರೂಯಿ ಲಾಂಗ್ ಕಳೆದ ಕೆಲವು ವರ್ಷಗಳಿಂದ ತಾಳ್ಮೆ, ಪ್ರೀತಿಯಿಂದ ಪಂಪನ್ ಮಾವೋ ನೀಡಿದ ಬೆಂಬಲಕ್ಕೆ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ. ಈಗಲಾದರೂ ನನ್ನನ್ನು ಮದುವೆಯಾಗುವೆಯಾ?" ಎಂದು ಬರೆದಿದ್ದ. ಮಾವೋ ಅವನ ಪ್ರಿಯತಮೆ. ಹೀಗೆ ಸಾರ್ವಜನಿಕವಾಗಿ ತನ್ನ ಪ್ರೀತಿಯನ್ನು ತೆರೆದಿಟ್ಟು, ಮದುವೆಯ ಆಹ್ವಾನವನ್ನು ನೀಡಿದ್ದ. ಪ್ರಬಂಧವನ್ನು ತಿದ್ದಿದ್ದ ಹಲವು ಹಿರಿಯ ವಿಜ್ಞಾನಿಗಳ ಕಣ್ಣಿಗೆ ಅದು ಬಿತ್ತೋ, ಇಲ್ಲವೋ ಗೊತ್ತಿಲ್ಲ. ಅಥವಾ ಬಿದ್ದಿದ್ದರೂ ಇರಲಿ ಎಂದು ಸುಮ್ಮನಿದ್ದರೋ ಎನ್ನುವ ಚರ್ಚೆಯೂ ನಡೆಯಿತು. ಏಕೆಂದರೆ ಹಾಗೆ ಪ್ರಬಂಧವನ್ನು ತಿದ್ದಿದವರು ಯಾರು ಎನ್ನವುದು ಗಲು ಗೋಪ್ಯವಾದ ಸಂಗತಿ. ಕೊನೆಗೆ ಮಾವೋವನ್ನು ಲಾಂಗ್ ಮದುವೆ ಆದ ಎನ್ನುವುದು ಸುದ್ದಿ. ಈ ವಿವಾಹ ಪ್ರಸ್ತಾಪ ಫಿಸಿಕಾ ಎ ಪತ್ರಿಕೆಯ ಸ್ಟಾಟಿಸ್ಟಿಕಲ್ ಮೆಕಾನಿಕ್ಸ್



ಅಂಡ್ ಅಪ್ಲಿಕೇಶನ್ಸ್ ಸಂಚಿಕೆಯಲ್ಲಿ ಪ್ರಕಟವಾಗಿತ್ತು.

ವೈಜ್ಞಾನಿಕ ಪ್ರಬಂಧದಲ್ಲಿ ವೈವಾಹಿಕ ಜೀವನದ ಪ್ರಸ್ತಾಪ ಬಂದಿದ್ದು ಇದು ಮೊದಲಲ್ಲವೆನ್ನಿ. 2015ನೇ ಇಸವಿಯಲ್ಲಿ ಶಿರದಲ್ಲಿ ಕೊಂಬು ಇದ್ದ ಹೊಸದೊಂದು ಡೈನೊಸಾರು ಜೀವಿಯನ್ನು ಪತ್ತೆ ಮಾಡಿದ ಪ್ರಬಂಧದ ಕೊನೆಯಲ್ಲಿ ಆಕಸ್ಮಿಕವೋ ಎನ್ನುವಂತೆ, "ಈ ಪ್ರಬಂಧದ ಲೇಖಕರಲ್ಲೊಬ್ಬರಾದ ಸಿಎಮ್ ಬಿ ಲೋರ್ನಾ ಓ ಬ್ರಿಯೆನ್ ನೀಡಿದ ಧೃಢವಾದ ಬೆಂಬಲವನ್ನು ಸ್ಮರಿಸಿದ್ದಾರೆ. ಲೋರ್ನಾ, ನನ್ನನ್ನು ಮದುವೆಯಾಗುವೆಯಾ?" ಎಂದು ಬರೆದಿತ್ತು.

ಬಹುಶಃ ಇದು ಲೇಖಕರ ಕಿಲಾಡಿತನ ಎಂದಷ್ಟೆ ಭಾವಿಸಿದರೆ ನಗು ಬರುವುದಿಲ್ಲ. ಆದರೆ ಕೃತಜ್ಞತೆಗಳನ್ನು ಅರ್ಪಿಸುವಾಗ ಹಲವು ಅಲಿಖಿತ ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಯಾರ ಹೆಸರನ್ನು ನೀವು ಮೊದಲು ಉಲ್ಲೇಖಿಸಬೇಕು, ಯಾರದ್ದು ಕೊನೆಗೆ ಎನ್ನುವುದಕ್ಕೂ ನಿಯಮಗಳಿವೆ. ಇವೆಲ್ಲವನ್ನೂ ಮೀರಿ ಹೀಗೆ ವಿವಾಹ ಪ್ರಸ್ತಾವನೆ ಪ್ರಕಟವಾಗಿದ್ದು ಅಚ್ಚರಿಯಷ್ಟೆ ಅಲ್ಲ, ಅವನ್ನು ನೋಡಿಯೂ ಪ್ರಕಟಣೆಗೆ ಕಳಿಸಿದ ಸಂಪಾದಕರ ಹಾಸ್ಯ ಪ್ರಜ್ಞೆಯನ್ನೂ ಮೆಚ್ಚಬೇಕಷ್ಟೆ.

ಆದರೆ ಕೃತಜ್ಞತೆಗಳು ಪ್ರೀತಿ, ಪ್ರೇಮಕ್ಕಷ್ಟೆ ಸೀಮಿತವಾಗಿರಬೇಕಿಲ್ಲ. ಅವು ಸಿಟ್ಟಿನ ದ್ಯೋತಕವೂ ಆಗಿರಬಹುದು. ಸಿಟ್ಟನ್ನೂ ಬಲು ಜಾಣತನದಿಂದ ಹಲವರು ಕಾರಿದ್ದಿದೆ. ಇಟಲಿಯ ಮೂವರು ವಿಜ್ಞಾನಿಗಳು ತಾವು ಬರೆದಿದ್ದ ಪ್ರಬಂಧದ ಕೊನೆಯಲ್ಲಿ ಕೃತಜ್ಞತೆಗಳ ಜೊತೆಗೆ ಕೃತಘ್ನತೆಯ ಒಂದು ಪ್ಯಾರಾವನ್ನೂ ಸೇರಿಸಿದ್ದರು. "ಈ ಸಂಶೋಧನೆಗೆ ಇಟಲಿಯ ವಿವಿಗಳು ಹಾಗೂ ಸಂಶೋಧನೆ ಮಂತ್ರಾಲಯ ಧನಸಹಾಯ ಮಾಡಿದೆ ಎಂದಿದೆ. ಆದರೆ ಮಂತ್ರಾಲಯವು ಇದುವರೆವಿಗೂ ಯಾವುದೇ ಹಣವನ್ನೂ ನೀಡಿಲ್ಲ ನೀಡುತ್ತದೆಯೋ ಇಲ್ಲವೋ ಗೊತ್ತಿಲ್ಲ." ಎಂದು ಬರೆದಿದ್ದರು.

ಲೇ ಫಾನ್ ವೇಲೆನ್ ಎಂಬಾತ ವಿಕಾಸವಾದದ ಕುರಿತು ಹಲವಾರು ಹೊಸ ಪರಿಕಲ್ಪನೆಗಳನ್ನು ಮಂಡಿಸಿದವ. ಈತ ಒಂದು ಪುಸ್ತಕದಲ್ಲಿ ಹೀಗೆ ಕೃತಜ್ಞತೆಗಳನ್ನು ಅರ್ಪಿಸಿದ್ದ. "ಜೀವಂತ ಪ್ರಾಣಿಗಳನ್ನು ಅಧ್ಯಯನ ಮಾಡುವ ಸಲುವಾಗಿ ಧನಸಹಾಯಕ್ಕಾಗಿ ನಾನು ಹಾಕಿದ ಎಲ್ಲ ಅರ್ಜಿಗಳನ್ನೂ ತಪ್ಪದೇ ನಿರಾಕರಿಸಿದ್ದಕ್ಕಾಗಿ ನ್ಯಾಶನಲ್ ಸೈನ್ಸ್ ಫೌಂಡೇಶನ್ನಿಗೆ ನಾನು ಕೃತಜ್ಞ, ಅದರಿಂದಾಗಿ ನಾನು ತಾರ್ಕಿಕ ಅಧ್ಯಯನಗಳನ್ನಷ್ಟೆ ಮಾಡಬೇಕಾಯಿತು." ಎಂದು ವ್ಯಂಗ್ಯ ನುಡಿದಿದ್ದ.

ಇನ್ನೊಬ್ಬ ಸಂಶೋಧಕ ಪಿಎಚ್‌ಡಿ ಪ್ರಬಂಧದಲ್ಲಿ ತನಗೆ ನೆರವಾದ ಸಂಗಡಿಗರನ್ನು ನೆನಪಿಸಿಕೊಂಡದ್ದು ವಿಶೇಷವೇ. "ಲೂಯಿಸ್ ರೈಟ್ ಮತ್ತು ರಾಸ್ ವಾಟ್ಸನ್ನರಿಗೆ ಲೈಬ್ರರಿಯಲ್ಲಿ ನನ್ನ ಜೊತೆಗೆ ಸಮಯ ಕಳೆದಿದ್ದಕ್ಕಾಗಿ ಧನ್ಯವಾದಗಳು ಮತ್ತು ನಾನು ಸೋಮಾರಿಯಾಗಿದ್ದಾಗ ನೆರವಾದ ವಿಲ್ ಬೇಟ್ಸ್ ಹ್ಯಾರಿಸನ್ ಮತ್ತು ಅಲೆಕ್ಸ್ ಕ್ಯಾಮೆರೂನರಿಗೂ ಕೃತಜ್ಞತೆಗಳು. ಹಾಗೆಯೇ ಈ ವರುಷ ನನ್ನಿಂದ ಆರು ಸಾವಿರ ಡಾಲರು ಹೆಚ್ಚು ಹಣವನ್ನು ಕಿತ್ತದ್ದಕ್ಕಾಗಿ ಡೇವಿಡ್ ಕ್ಯಾಮೆರೂನರಿಗೂ ಧನ್ಯವಾದಗಳು." ಡೇವಿಡ್ ಕ್ಯಾಮೆರೂನ್ ಅವರ ವಿವಿಯ ಮುಖ್ಯಸ್ಥ!

ಕೃತಜ್ಞತೆಗಳನ್ನು ಕೇವಲ ಮನುಷ್ಯರಿಗಷ್ಟೆ ಮೀಸಲಾಗಿಟ್ಟಿರುತ್ತಾರೆ ಎಂದು ಕೊಳ್ಳಬೇಡಿ. ಕೆಲವರು ಅವನ್ನು ವಸ್ತುಗಳಿಗೂ ನೀಡುವುದುಂಟು. "ಕೆನಡಾದ ವ್ಯಾಂಕೋವರಿನಿಂದ ಸರ್ರೆಗೆ ಪಯಣಿಸುವ ಸಮಯದಲ್ಲಿ ಈ ಪ್ರಬಂಧದ ಬಹು ಭಾಗವನ್ನು ಬರೆದೆ. ಹೀಗೆ ಬಸ್ಸು ಮತ್ತು ರೈಲುಗಳಲ್ಲಿ ಬರೆವಣಿಗೆ ಸರಾಗವಾಗಿರುವಂತೆ ಅನುಕೂಲ ಮಾಡಿರುವ ಟ್ರಾನ್ಸ್ಲಿಂಕ್ ಮತ್ತು ವ್ಯಾಂಕೋವರಿನ ಮೆಟ್ರೋ ಮೊದಲಾದ ಪ್ರಾದೇಶಿಕ ಸಾರಿಗೆಗಳಿಗೆ ನನ್ನ ಕೃತಜ್ಞತೆಗಳು," ಎಂದು ನಿತ್ಯವೂ ಬಲು ದೂರ ಪಯಣಿಸಬೇಕಾದ ದರ್ದಿಗೆ ಬಿದ್ದಿದ್ದ ಸಂಶೋಧಕನೊಬ್ಬ ಬರೆದುಕೊಂಡಿದ್ದ.

ಇವನ್ನೆಲ್ಲ ಹಾಸ್ಯ ಎನ್ನಬೇಕೋ, ಸೃಜನಶೀಲತೆ ಎನ್ನಬೇಕೋ ನೀವೇ ಯೋಚಿಸಿ. ಋಣ ತೀರಿಸುವುದರಲ್ಲಿ ಇನ್ನೂ ಹೆಚ್ಚಿನ ಸೃಜನಶೀಲರಾದ ಸಂಶೋಧಕರಿದ್ದಾರೆ. ಈಗ ಹಾರ್ವರ್ಡ್ ಮೆಡಿಕಲ್ ಸ್ಕೂಲಿನಲ್ಲಿ ಸಂಶೋಧಕರಾಗಿರುವ ಜೆರೆಮಿ ವೂಲ್ಫ್ ತಮ್ಮ ಹರೆಯದಲ್ಲಿ ಬರೆದ ಪಿಎಚ್ಡಿ ಪ್ರಬಂಧದ ಕೃತಜ್ಞತೆ–ಯ ಪುಟ ಪಾಠವಾಗಿರಲಿಲ್ಲ. ಅದೊಂದು ಪ್ರಶ್ನೋತ್ತರ ಪತ್ರಿಕೆಯಾಗಿತ್ತು. ಕ್ವಿಜ್ ರೂಪದಲ್ಲಿ ಇತ್ತು. "ಜೆರೆಮಿ ಸ್ಯಾಂಡೆಲ್ ಗೆ ಕೃತಜ್ಞತೆಯ ಶ್ರೇಯದಲ್ಲಿ ಆದ್ಯತೆ ಏಕೆಂದರೆ: 1. ಪ್ರಬಂಧದಲ್ಲಿರುವ ಚಿತ್ರಗಳನ್ನೆಲ್ಲ ಒದಗಿಸಿದಳು 2. ನನ್ನನ್ನು ಮದುವೆಯಾಗಿದ್ದಕ್ಕಾಗಿ 3. ನನ್ನನ್ನು ಮದುವೆಯಾಗಿದ್ದರೂ, ಚಿತ್ರಗಳನ್ನೆಲ್ಲ ಒದಗಿಸಿದ್ದಕ್ಕಾಗಿ 4. ನ್ಯಾಶನಲ್ ಸೈನ್ಸ್ ಫೌಂಡೇಶನ್ನಿನ ಮುಖ್ಯಸ್ಥೆಯಾಗಿರುವುದರಿಂದ." ಹೀಗಿತ್ತು ಅವನ ಋಣಪುಟ.

> **ಬಹುಶಃ ಇದು ಲೇಖಕರ ಕಿಲಾಡಿತನ ಎಂದಷ್ಟೆ ಭಾವಿಸಿದರೆ ನಗು ಬರುವುದಿಲ್ಲ. ಆದರೆ ಕೃತಜ್ಞತೆಗಳನ್ನು ಅರ್ಪಿಸುವಾಗ ಹಲವು ಅಲಿಖಿತ ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಯಾರ ಹೆಸರನ್ನು ನೀವು ಮೊದಲು ಉಲ್ಲೇಖಿಸಬೇಕು, ಯಾರದ್ದು ಕೊನೆಗೆ ಎನ್ನುವುದಕ್ಕೂ ನಿಯಮಗಳಿವೆ.**

ಅಪ್ಪ, ಅಮ್ಮಂದಿರು, ಮಡದಿ, ಮಕ್ಕಳಿಗೆ ಪರೋಕ್ಷವಾಗಿ ನೆರವು ನೀಡಿದ್ದಕ್ಕಾಗಿ ಕೃತಜ್ಞತೆ ಸಲ್ಲಿಸುವುದು ವಿಶೇಷವೇನಲ್ಲ. "ರಕ್ತದ ಮಾದರಿಗಳನ್ನು ಉದಾರವಾಗಿ ಪೂರೈಸಿದ ಎನ್ರಿಕೋ ಬರ್ನಾರ್ಡ್, ಬ್ರಾಕ್ ಫೆಂಟನ್ ಹಾಗೂ ಮೋ ಗ್ರೆಗರಿ ಮತ್ತು ಜಾನ್ ರೇಟ್ಕ್ಲಿಫ್ ರಿಗೆ ಧನ್ಯವಾದಗಳು." ಎಂಬ ಉಲ್ಲೇಖ ಸಾಮಾನ್ಯವೇ. ಆದರೆ ಇದರಲ್ಲಿ ಇರುವ ಮೋ ಗ್ರೆಗರಿ ಲೇಖಕನ ಗೆಳೆಯನಲ್ಲ, ಸಾಕುಬೆಕ್ಕು!

ಗೆಳೆಯರಿಗೆ ಹೀಗೂ ಧನ್ಯವಾದಗಳನ್ನು ಅರ್ಪಿಸಿದವರಿದ್ದಾರೆ. "ಈ ಸಂಶೋಧನೆಯನ್ನು ಸಾಧ್ಯಗೊಳಿಸಿದ ನನ್ನ ಮಾರ್ಗದರ್ಶಿಗಳು, ಸಹಸಂಶೋಧಕರು, ಸಹೋದ್ಯೋಗಿಗಳು, ಗುರುಗಳು ಹಾಗೂ ಕುಟುಂಬದ ಸದಸ್ಯರಿಗೆ ಕೃತಜ್ಞತೆಗಳು. ನನ್ನ ಗೆಳೆಯರಿಗೂ ಕೃತಜ್ಞತೆಗಳು. ಈ ಗೆಳೆಯರು ಇಲ್ಲದಿದ್ದರೆ ಈ ಸಂಶೋಧನೆ ಇನ್ನೂ ಎರಡು ವರ್ಷ ಬೇಗನೆ ಮುಗಿಯುತ್ತಿತ್ತು."!

ಕೊಳ್ಳೇಗಾಲ ಶರ್ಮ





# ಸ್ಟ್ರೀಮರ್

ನವಸಂಶೋಧಕರಿಗೆ ನೆರವಾಗುವ ಹೊಸ ಸಾಧನ. ದಿ ಫೇಕ್ಲ್ಯಾಂಡ್ ಮಾಯಾ ಎನ್ನುವ ಕಂಪೆನಿಯ ವಿಜ್ಞಾನಿಗಳು ನ್ಯೂರೋಸರ್ಕೀಟುಗಳು ಹಾಗೂ ಆರ್ಟಿಫಿಶಿಯಲ್ ಇಂಟೆಲಿಜೆನ್ಸ್ ತಂತ್ರಜ್ಞಾನವನ್ನು ಬಳಸುವ ವಿನೂತನ ಸಾಧನವೊಂದನ್ನು ಸೃಷ್ಟಿಸಿದ್ದಾರೆ. ಇದು ಹೊಸ, ಹೊಸ ಕಲ್ಪನೆಗಳನ್ನು ರೂಪಿಸಲು ನೆರವಾಗುತ್ತದೆ. ನಿಮ್ಮ ಮನಸ್ಸಿನಲ್ಲಿರುವ ಚಿಂತನೆಗಳನ್ನು ಗ್ರಹಿಸಿ, ಅದಕ್ಕೆ ತಕ್ಕಂತೆ ಹೊಸದಾದ ಪರಿಕಲ್ಪನೆಗಳನ್ನು ಸೃಷ್ಟಿಸಿ ನಿಮಗೆ ತಿಳಿಸುವ ಈ ಸಾಧನವನ್ನು ಸ್ಟ್ರೀಮರ್ ಎಂದು ಹೆಸರಿಸಲಾಗಿದೆ.

ಸಾಧಾರಣ ಮೇಜಿನಂತೆ ಇರುವ ಈ ಸಾಧನದ ಮೇಲ್ಮೈನಲ್ಲಿ ಅತ್ಯಂತ ನಾಜೂಕಾದ ಸಂವೇದಕಗಳನ್ನು ಹುದುಗಿಸಿ ಇಡಲಾಗಿದೆ. ಟಚ್ ಸ್ಕ್ರೀನ್ ನಂತಹ ಮೇಲ್ಮೈ ಇರುವ ಇದು ಮುಟ್ಟಿದರೆ ಮುನಿಯುವುದಿಲ್ಲ. ಆದ–ರೆ ನಮ್ಮ ಮಿದುಳಿನಲ್ಲಿ ನಡೆಯುತ್ತಿರುವ ವಿದ್ಯುತ್ ಚಟುವಟಿಕೆಗಳನ್ನು ಸುಲಭವಾಗಿ ಗ್ರಹಿಸಿ, ಸಂಗ್ರಹಿಸಿಟ್ಟುಕೊಳ್ಳಬಲ್ಲುದು.

ಈ ಮೇಜಿನ ಮೇಲೆ ಸುಮ್ಮನೆ ತಲೆಯಿಟ್ಟು ಮಲಗಿದರೆ ಸಾಕು. ಮಿದುಳಿನಲ್ಲಿ ನಡೆಯುವ ವಿದ್ಯುತ್ ಚಟುವಟಿಕೆಗಳನ್ನು, ಅರ್ಥಾತ್ ನಮ್ಮ ಆಲೋಚನೆಗಳನ್ನು ಇದು ಗ್ರಹಿಸಿ, ಕೂಡಿಸಿಟ್ಟುಕೊಳ್ಳುತ್ತದೆ. ಇದಕ್ಕಾಗಿ ನ್ಯೂರೋಸರ್ಕೀಟುಗಳ ತಂತ್ರಜ್ಞಾನ ನೆರವಾಗಲಿದೆ ಎನ್ನುತ್ತಾರೆ ಫೇಕ್ಲ್ಯಾಂಡ್ ಮಾಯಾ ಕಂಪೆನಿಯ ಪ್ರಮುಖ ವಿಜ್ಞಾನಿ ಪ್ರೊ. ಮಾಯಾ.

ಸೈಬರ್ ಮನುಷ್ಯರಿಗೆ ಮಾಡುವಂತೆ ತಲೆಯೊಳಗೆ ಚಿಪ್ ಅಥವಾ ಇನ್ನ್ಯಾವುದೇ ಇಲೆಕ್ಟ್ರಾನಿಕ್ ಸಾಧನಗಳನ್ನು ಹೊಂದಿಸಬೇಕಿಲ್ಲ. "ಇಡೀ ಸಾಧನ ಇಂಡಕ್ಟಿವ್ ಸೆನ್ಸಾರು"ಗಳ ತಂತ್ರವನ್ನು ಬಳಸುತ್ತದೆ. ಮೇಜಿನ ಮೇಲೆ ತಲೆಯಿಟ್ಟಾಗ ಅಲ್ಲೊಂದು ವಿಶೇಷ ವಿದ್ಯುತ್ ವಲಯ ಸೃಷ್ಟಿಯಾಗುತ್ತದೆ. ಇದು ಮಿದುಳಿನಲ್ಲಿ ಆಗುವ ಸಂಕೇತಗಳ ಜೊತೆಗೆ ವರ್ತಿಸುತ್ತದೆ. ಇದರಿಂದ ಉಂಟಾಗುವ ವ್ಯತ್ಯಾಸವನ್ನು ಮೇಜಿನ ಮೇಲಿರುವ ಸೂಕ್ಷ್ಮ ಸಂವೇದಕಗಳು ಗ್ರಹಿಸಿ, ಅಲ್ಲಿಯೇ ಇರಿಸಿರುವ ಗಣಕಯಂತ್ರಕ್ಕೆ ರವಾನಿಸುತ್ತವೆ. ಗಣಕಯಂತ್ರದಲ್ಲಿರುವ ಆರ್ಟಿಫಿಶಿಯಲ್ ಇಂಟೆಲ್ಲಿಜೆನ್ಸ್ ತಂತ್ರಾಂಶಗಳು ಈ ಸಂಕೇತಗಳಲ್ಲಿನ ವಿನ್ಯಾಸವನ್ನು ಗುರುತಿಸುತ್ತವೆ. ತಮ್ಮಲ್ಲಿ ಇರುವ ಆಲೋಚನೆಗಳ ನಿಘಂಟಿನೊಂದಿಗೆ ಹೋಲಿಸಿ ಅಲ್ಲೇನು ನಡೆದಿದೆ ಎಂದು ಕಲ್ಪಿಸುತ್ತವೆ. ಅವಶ್ಯಕವಾದರೆ ಇಂಟರ್‌ನೆಟ್ ಅಥವಾ ತಮ್ಮಂತಹ ಇತರೆ ಮೇಜುಗಳ ಜಾಲದಲ್ಲಿ ಇರುವ ಮಾಹಿತಿಗಳನ್ನೂ ಗಮನಿಸಿ, ಅದಕ್ಕೆ ತಕ್ಕಂತೆ ಪ್ರತಿಕ್ರಯಿಸಬಲ್ಲುದು.

"ಅಷ್ಟೇ ಅಲ್ಲ. ಅದಕ್ಕೆ ಪ್ರತಿಕ್ರಿಯೆಯಾಗಿ ಮಿದುಳಿನಲ್ಲಿರುವ ಆಲೋಚನೆಗಳಿಗೆ ಪೂರಕವಾದ ಸಂಕೇತಗಳನ್ನು ಸೃಷ್ಟಿಸುವಂತೆ ಪ್ರೇರೇಪಿಸುತ್ತವೆ. ಉದಾಹರಣೆಗೆ, ಹಸಿವೆಯ ಸಂಕೇತಗಳು ಕಂಡಾಗ ಅದಕ್ಕೆ ತಕ್ಕ ಹಾಗೆ ವಿವಿಧ ತಿನಿಸುಗಳನ್ನು ಕಲ್ಪಿಸಿಕೊಳ್ಳುವ ರೀತಿ ಸಂಕೇತಗಳನ್ನು ನೀಡಬಹುದು. ಅಥವಾ ಹೊಟ್ಟೆ ತುಂಬಿದಂತಹ ಸಂಕೇತಗಳನ್ನೂ ನೀಡಬಹುದು." ಎನ್ನುತ್ತಾರೆ ಪ್ರೊ. ಮಾಯಾ.

"ಇಂತಹ ಸಾಧನಗಳ ಅವಶ್ಯಕತೆ ಇದೆ. ದಿನವೂ ಶಾಲೆಗೆ ಉಪಾಹಾರ ಸೇವಿಸದೆ ಬರುವ ವಿದ್ಯಾರ್ಥಿಗಳಿಗೆ ಹೊಟ್ಟೆ ತುಂಬಿದ ಅನುಭವ ನೀಡುವಂತಹ ಮೇಜುಗಳು ಬೇಕು. ಹಾಗೆಯೇ ಕಛೇರಿಯಲ್ಲಿ ನಿದ್ರೆ ಮಾಡುವ ಗುಮಾಸ್ತರೂ ವಿವಿಧ ಕಡತಗಳ ಬಗ್ಗೆ ವಿಚಾರ ಮಾಡುವಂತೆ ಪ್ರೇರೇಪಿಸುವ ಮೇಜನ್ನೂ ಸಿದ್ಧಪಡಿಸಬಹುದು. ಇದೆಲ್ಲಕ್ಕಿಂತಲೂ ಮುಖ್ಯವಾಗಿ ವಿಜ್ಞಾನಿಗಳಿಗೆ ಇದು ಬಲು ಉಪಯುಕ್ತ. ಹೊಸ, ಹೊಸ ಇನ್ವೆಂಶನ್ ಗಳನ್ನು ಮಾಡಲು ತಿಣುಕುತ್ತಿರುವವರಿಗೆ ಹೊಸ, ಹೊಸ ಕಲ್ಪನೆಗಳು ಮೂಡುವಂತೆ ಇದು ಮಾಡಬಲ್ಲುದು ಎನ್ನುತ್ತಾರೆ", ಇದೇ ಬಗೆಯ ಸಂಶೋಧನೆಯಲ್ಲಿ ತೊಡಗಿಕೊಂಡಿರುವ ಸ್ಲೈಟ್ ಆಫ್ ಹ್ಯಾಂಡ್ ಕಂಪೆನಿಯ ವಿಜ್ಞಾನಿ ಡಾ. ರಾಬರ್ಟ್ ಬ್ಲೈಂಡ್ ಮನ್.

ಕನಸುಗಳನ್ನು ಸ್ಟ್ರೀಮ್ ಮಾಡುವುದರಿಂದ ಇದಕ್ಕೆ ಸ್ಟ್ರೀಮರ್ ಎಂಬ ಹೆಸರು. ತಮ್ಮ ಪ್ರಯೋಗಾಲಯದಲ್ಲಿಯೇ ಇದನ್ನು ।ಪ್ರಾತ್ಯಕ್ಷಿ–ಕೆಗೆ ಇಟ್ಟಿರುವುದಾಗಿಯೂ, ಇಷ್ಟವುಳ್ಳವರು ಅದನ್ನು ಪ್ರಯೋಗಿಸಿ ನೋಡಬಹುದೆಂದೂ ಡಾ. ಮಾಯಾ ತಿಳಿಸಿದ್ದಾರೆ. ಸಂಪರ್ಕಿಸಬೇಕಾದ ವಿಳಾಸ: spuriousscience@aprilfool.com




# ವಿಕ್ರಮ ಮತ್ತು ಬೇತಾಳನ ಕಥೆಗಳು



# ಈ ಮೂರರಲ್ಲಿ ಹಿತವರು ಯಾವುದು?

ಕೆಲಸ ಸಾಗಬೇಕೆಂದರೆ ಬೇಸರಿಸಬಾರದು ಎನ್ನುವುದು ವಿಕ್ರಮನಿಗೆ ಗೊತ್ತಿತ್ತು. ಅದಕ್ಕೇ ಬೇತಾಳ ಒಂದ ಹಾರಿ ಹೋದಾಗ, ತಡಮಾಡದೇ ಅದನ್ನು ಹಿಂಬಾಲಿಸಿದ. ಬೇತಾಳ ಮರಳಿ ಅದೇ ಮರಕ್ಕೆ ಹೋಗಿ ಜೋತಾಡತೊಡಗಿತು. ವಿಕ್ರಮನೂ ಹಿಂದಿನಂತೆಯೇ ಮರ ಹತ್ತಿ, ಕತ್ತಿಯಿಂದ ಹಗ್ಗವನ್ನು ಕತ್ತರಿಸಿ, ಬೇತಾಳವನ್ನು ಹೆಗಲ ಮೇಲೇರಿಸಿ ಮರಳಿ ಸ್ಮಶಾನದ ಕಡೆಗೆ ನಡೆಯತೊಡಗಿದೆ.

ಕತ್ತಲೆಯ ಹಾದಿ. ನೀರವ ರಾತ್ರಿ. ಮೌನ ಮುರಿದರೆ ಮತ್ತೆ ಮತ್ತೆ ಬೇತಾಳ ಎಲ್ಲಿ ಮರ ಹುಡುಕಿ ಹೋಗಿಬಿಡತ್ತದೆಯೋ ಎಂದು ವಿಕ್ರಮ ಉಸಿರನ್ನೂ ಬಿಗಿ ಹಿಡಿದುಕೊಂಡು ದಾಪುಗಾಲು ಹಾಕಿದ್ದ. ಆದರೆ ಬೇತಾಳ ಸುಮ್ಮನಿರಬೇಕಲ್ಲ! ವಿಕ್ರಮನನ್ನು ಹೇಗಾದರೂ ಮಾತಿಗೆಳೆದು, ಅವನ ಮೌನ ಮುರಿಯಬೇಕೆಂದು ತೀರ್ಮಾನಿಸಿತ್ತು. ವಿಕ್ರಮನನ್ನು ಮಾತಿಗೆಳೆಯಿತು.

"ರಾಜಾ. ನೀನು ನನ್ನ ಗೆಳೆಯನ ಹಾಗೆ. ವೃಥಾ ಹೀಗೆ ಶ್ರಮ ಪಡುತ್ತೀಯಲ್ಲ? ನಿನಗೇಕೆ ಶವದ ಉಸಾಬರಿ ಅಂತ ಸುಮ್ಮನಿರಬಾರದೇ?" ಎಂದು ಕೆಣಕಿತು. ವಿಕ್ರಮ ಉತ್ತರಿಸಲಿಲ್ಲ. ಅವನಷ್ಟೇ ಹಠವಾದಿಯಾದ ಬೇತಾಳವೂ ಸುಮ್ಮನಿರಲಿಲ್ಲ. ಮಾತು ಮುಂದುವರೆಸಿತು.

"ಹೋಗಲಿ ಬಿಡು ರಾಜ. ಶ್ರಮ ಎಂದರೆ ನಿನಗೆ ಖುಷಿ ಎಂದು ತೋರುತ್ತದೆ. ಅದು ನಿನ್ನ ಕರ್ಮ. ಆದರೂ ನಿನ್ನ ಶ್ರಮ ಸ್ವಲ್ಪ ಹಗುರವಾಗಲಿ ಅಂತ ಒಂದು ಕಥೆ ಹೇಳುತ್ತೇನೆ. ಹಾದಿ ಕ್ರಮಿಸುವುದು ಗೊತ್ತೇ ಆಗುವುದಿಲ್ಲ," ಎಂದು ನುಡಿದು ಕಥೆಯನ್ನು ಆರಂಭಿಸಿತು.

"ಒಂದೂರಲ್ಲಿ ಇಬ್ಬರು ವಿದ್ವಾಂಸರಿದ್ದರು. ಹೆಸರು ನಿನಗೆ ಇಷ್ಟವಾದದ್ದು ಇಟ್ಟುಕೋ. ಇಬ್ಬರೂ ಬುದ್ಧಿವಂತರೇ. ಜೊತೆಗೆ ಗೆಳೆಯರು ಕೂಡ. ಗೊತ್ತಲ್ಲ?! ಇಬ್ಬರು ವಿದ್ವಾಂಸರು, ಜಟ್ಟಿಗಳು, ರಾಜರು, ರಾಜಕಾರಣಿಗಳು, ಕ್ರೀಡಾಳುಗಳು ಜೊತೆಯಾದರೆ ಸ್ಪರ್ಧೆ ಆಗಲೇಬೇಕಲ್ಲ!? ಇವರಿಬ್ಬರ ಮಧ್ಯೆಯೂ ಸದಾ ಪೈಪೋಟಿ ನಡೆಯುತ್ತಿತ್ತು. ನಾನು ಮೇಲು. ನಾನು ಮೇಲು ಅಂತ.

"ಪ್ರತಿದಿನವೂ ಒಬ್ಬ ಇನ್ನೊಬ್ಬನಿಗೆ ಹೊಸದೊಂದು ಸವಾಲು ಹಾಕುವುದು. ಅದಕ್ಕೆ ಉತ್ತರಿಸಿದ ಇನ್ನೊಬ್ಬ ಮರು ಸವಾಲು ಹಾಕುವುದು, ನಡೆದೇ ಇತ್ತು. ಇಂತಹ ಗೆಳೆಯರು ಒಮ್ಮೆ ಪ್ರವಾಸ ಹೊರಟರು. ಪ್ರಪಂಚವನ್ನೆಲ್ಲ ಸುತ್ತಿ ನೋಡಿ, ತಮಗಿಂತಲೂ ಬುದ್ಧಿವಂತರ ಜೊತೆಗೆ ಸ್ಪರ್ಧಿಸಬೇಕು ಎನ್ನುವುದು ಅವರ ಆಸೆ.

"ಇಬ್ಬರೂ ಒಂದೊಂದು ಬೈಕು ಹತ್ತಿ, ಒಂದಿಷ್ಟು ಬಟ್ಟೆ ಗಂಟು ಕಟ್ಟಿಕೊಂಡು ಹೊರಟು ಬಿಟ್ಟರು. ಸಂಜೆ ಆಗುವ ವೇಳೆಗೆ ಯಾವ ಊರು ಬರುತ್ತದೆಯೋ ಅಲ್ಲಿ ವಾಸ. ಮರುದಿನ ಸೂರ್ಯೋದಯವಾದ ಕೂಡಲೇ, ಶುಚಿಯಾಗಿ ಇನ್ನೊಂದು ಊರಿಗೆ ಪಯಣ. ಹೀಗೆ ಅವರ ಪ್ರವಾಸ ನಡೆದಿತ್ತು.

"ಒಂದು ಸಂಜೆ ಹೀಗೇ ಪಯಣಿಸುತ್ತಿದ್ದಾಗ, ರಾತ್ರಿ ಆಗಿಯೇ ಹೋಯಿತು. ಯಾವುದೇ ಪಟ್ಟಣವೂ ಕಾಣಿಸಲಿಲ್ಲ. ಒಬ್ಬರು ಇನ್ನೊಬ್ಬರ ಜೊತೆಗೆ ಮಾತಿನ ಭರದಲ್ಲಿ ಹಾದಿ ತಪ್ಪಿದ್ದನ್ನು ಗಮನಿಸಿಯೇ ಇರಲಿಲ್ಲ. ಅದೊಂದು ಪರ್ವತ ಪ್ರದೇಶ. ಸುತ್ತಿ ಬಳಸಿ ರಸ್ತೆ ಸಾಗಿತ್ತು. ನಡು, ನಡುವೆ ಅಲ್ಲಲ್ಲಿ ಸಣ್ಣ, ಸಣ್ಣ ತೊರೆಗಳು ಅಡ್ಡಿಯಾಗುತ್ತಿದ್ದುವು. ಕಣಿವೆಗಳು ಸಿಗುತ್ತಿದ್ದುವು. ನರಿ, ತೋಳಗಳು ಊಳಿಡುವ ಸದ್ದು ಕೇಳ ತೊಡಗಿದಂತೆ ಗೆಳೆಯರಿಗೆ ನಡುಕ ಆರಂಭವಾಯಿತು. ಎಷ್ಟೇ ಬುದ್ಧಿವಂತರಾದರೂ, ನಿನ್ನ ಹಾಗೆ ಧೈರ್ಯವಂತರಾದರೂ, ಆಕಸ್ಮಿಕಗಳಿಗೆ, ಅಪರಿಚಿತ

ಧ್ವನಿಗಳಿಗೆ ಹೆದರಲೇ ಬೇಕು ಅಲ್ಲವೇ?

"ಗೆಳೆಯರು ಎಲ್ಲಿಯಾದರೂ ತಂಗಬೇಕಲ್ಲ ಎಂದು ಯೋಚಿಸುವಷ್ಟರಲ್ಲಿ, ಎಲ್ಲೋ ಬೆಳಕು ಕಂಡಿತು. ರಸ್ತೆಯಿಂದ ಒಳಗೆ, ಕಾಡಿನೊಳಗೆ ಮಿಣುಕುತ್ತಿದ್ದ ಆ ಬೆಳಕನ್ನೇ ಅರಸಿ ಹೋದರು. ಬೆಳಕಿನ ಸಮೀಪ ಹೋದಾಗ ಕಂಡಿದ್ದು ಒಂದು ಪಾಳುಬಂಗಲೆ. ಮೂರಂತಸ್ತಿನ ದೊಡ್ಡ ಕಾವಲು ಕಂಭ. ಅದಕ್ಕೊಂದು ದೊಡ್ಡ ಬಾಗಿಲು. ಬಾಗಿಲಿನ ಮುಂದೆ ಹೊಸ್ತಿಲು ಇರುವಲ್ಲಿ ಒಂದು ಹಲಗೆ ಇತ್ತು. ಅದರ ಮೇಲೆ ನಿಂತಾಕ್ಷಣ, ಅದೊಂದು ಹಳ್ಳದ ಮೇಲೆ ಇದೆ ಎನ್ನುವುದು ಸ್ಪಷ್ಟವಾಗಿ ತಿಳಿಯುತ್ತಿತ್ತು.



"ಬಾಗಿಲ ಬಳಿಯಲ್ಲಿ ಮೂರು ಕೊಂತಗಳಿದ್ದುವು. ಬುದ್ಧಿವಂತ ಗೆಳೆಯರು ಅವನ್ನೆಲ್ಲ ಸೂಕ್ಷ್ಮವಾಗಿ ಗಮನಿಸಿದರು. ಆ ಮೂರು ಕೊಂತಗಳಲ್ಲಿ ಯಾವುದೋ ಒಂದು ಬಾಗಿಲನ್ನು ತೆರೆಯಲು ಇರಬಹುದು ಎನ್ನಿಸಿತು. ಇನ್ನೊಂದು ಆಕ್ರಮಣಕ್ಕೆ ಬಂದವರಿಗೆ ಮೋಸ ಮಾಡಿ, ಹಲಗೆಯ ಕೆಳಗಿನ ಕಂದಕಕ್ಕೆ ದೂಡುವುದಕ್ಕೆ ಇರಬಹುದು ಎಂದು ಅನಿಸಿತು. ಮೂರನೆಯದು ಬಾಗಿಲು ತಟ್ಟಲು ಇರಬಹುದು ಎಂದು ಊಹಿಸಿದರು.

"ಅಂತೂ ರಾತ್ರಿ ಸುರಕ್ಷಿತವಾಗಿ ಉಳಿಯಲು ಒಂದು ಜಾಗ ಸಿಕ್ಕಿತು ಎನ್ನುವ ಖುಷಿ. ಅದರ ಜೊತೆಗೇ ಸಮಸ್ಯೆಯೂ ಇತ್ತು. ಬಾಗಿಲು ತೆಗೆಯುವ ಕೊಂತ ಯಾವುದು ಎಂದು ತಿಳಿಯುವುದು ಹೇಗೆ? ಅದರ ಬದಲಿಗೆ ಹಲಗೆಯನ್ನು ಬೀಳಿಸುವ ಕೊಂತವನ್ನು ಎಳೆದು ಬಿಟ್ಟರೆ ಸಾವು ಖಂಡಿತ. ಇನ್ನೊಂದು ಕೊಂತದ ಹಿಂದೆ ಇನ್ನೇನಿದೆಯೋ? ಅಪಾಯವಿಲ್ಲದ ಹಾಗೆ ಬಾಗಿಲನ್ನಷ್ಟೆ ತೆರೆಯುವ ಕೊಂತವನ್ನು ಗುರುತಿಸುವುದು ಹೇಗೆ?"

ಬೇತಾಳ ಕಥೆ ಹೇಳುತ್ತಿದ್ದ ಹಾಗೆ ವಿಕ್ರಮನ ನಡಿಗೆ ತುಸು ನಿಧಾನವಾಯಿತು. ಅಂದರೆ ಅವನಿಗೆ ಆಸಕ್ತಿ ಹುಟ್ಟಿತು ಎಂದು ಅರಿತ ಬೇತಾಳ ಇನ್ನಷ್ಟು ಉತ್ಸಾಹದಿಂದ ಕಥೆಯನ್ನು ಮುಂದುವರೆಸಿತು.

"ಬುದ್ಧಿವಂತರ ನಡುವೆ ಚರ್ಚೆ ಆರಂಭವಾಯಿತು. ಮೊದಲನೆಯವ ಎರಡನೆಯವನಿಗೆ ನೀನೇ ಕೊಂತವನ್ನು ಎಳೆ ಎಂದ. ಎರಡನೆಯವ ಮೊದಲನೆಯವನಿಗೆ. ಇಬ್ಬರೂ ಕೊಂತವನ್ನು ಎಳೆಯಲು ಸಿದ್ಧರಿರಲಿಲ್ಲ. ಏಕೆಂದರೆ ಬಾಗಿಲು ತೆಗೆಯುವ ಕೊಂತ ಯಾವುದು ಎಂದು ಖಚಿತವಾಗಬೇಕಾದರೆ, ಕನಿಷ್ಠ ಎರಡು ಪ್ರಯತ್ನಗಳನ್ನು ಮಾಡಬೇಕಿತ್ತು. ಒಂದು ವೇಳೆ ಮೊದಲನೆಯದೇ ಹಲಗೆಯನ್ನು ಬೀಳಿಸುವ ಕೊಂತವಾಗಿದ್ದರೆ, ಇಬ್ಬರಿಗೂ ಸಾವು ಗ್ಯಾರಂಟಿ. ಹೀಗೆಂದು ಯೋಚಿಸಿದ ಅವರು ಒಬ್ಬರಿನ್ನೊಬ್ಬರು ಮೊದಲು ಕೊಂತವನ್ನು ಎಳೆಯಲಿ ಎಂದು ವಾದಿಸಿದರು.

"ಕೊನೆಗೆ ವಾದ, ವಿವಾದದಿಂದ ಪ್ರಯೋಜನವಿಲ್ಲ. ಸ್ವಲ್ಪ ಯೋಚಿಸಿ ನೋಡೋಣ ಎಂದುಕೊಂಡ ಅವರು, ಆಚೀಚೆ ಓಡಾಡಿದರು. ಕೊನೆಗೆ ಧೈರ್ಯ ಮಾಡಿದ ಎರಡನೆಯವ ಬಂದು ಒಂದು ಕೊಂತವನ್ನು ಎಳೆದ. ಬಾಗಿಲು ತೆಗೆಯಿತು."

ಬೇತಾಳ ಇದನ್ನು ಹೇಳಿ ಮುಗಿಸುವಷ್ಟರಲ್ಲಿ, ರಾಜಾ ವಿಕ್ರಮನ ಬಾಯಿಂದ ಕೇಳಿಯೂ ಕೇಳದಂತೆ ಆಹಾ ಎನ್ನುವ ಶಬ್ದ ಹೊರ ಬಿದ್ದಾಗಿ–ತ್ತು. ತಕ್ಷಣವೇ ಬೇತಾಳ, "ರಾಜಾ. ಎರಡನೆಯವನಿಗೆ ಆ ಕೊಂತವನ್ನೇ ಎಳೆದರೆ ಬಾಗಿಲು ತೆಗೆಯುತ್ತದೆ ಎಂದು ಗೊತ್ತಾದದ್ದು ಹೇಗೆ? ಈ ಪ್ರಶ್ನೆಗೆ ನಿನಗೆ ಉತ್ತರ ಗೊತ್ತಿದೆ ಎಂದು ನನಗೆ ಗೊತ್ತು. ಹಾಗಿದ್ದೂ ನೀನು ಉತ್ತರವನ್ನು ಹೇಳದೆಯೇ ಹೋದರೆ, ನಿನ್ನ ತಲೆ ಸಾವಿರ ಚೂರುಗಳಾಗಿ ಸಿಡಿದು ಹೋಗುತ್ತದೆ." ಎಂದು ಬೆದರಿಸಿತು.

ಮೌನ ಮುರಿದ ರಾಜಾ ವಿಕ್ರಮ ಬೇತಾಳಕ್ಕೆ ಉತ್ತರ ಹೇಳಿದ. ಅವನು ಮಾತನಾಡಿದ ಕೂಡಲೇ ಬೇತಾಳ ಥಟ್ಟನೆ ವಿಕ್ರಮನ ಹೆಗಲು ಬಿಟ್ಟು ಹಾರಿ ಹೋಯಿತು. ವಿಕ್ರಮ ಅದನ್ನು ಮತ್ತೆ ಬೆಂಬತ್ತಿದ.

ಅಂದ ಹಾಗೆ? ಈ ಪ್ರಶ್ನೆಗೆ ನಿಮಗೂ ಉತ್ತರ ಗೊತ್ತಿರಬೇಕಲ್ಲ? ಗೊತ್ತಿದ್ದರೆ ಬರೆದು ತಿಳಿಸಿ. ಇಲ್ಲದಿದ್ದರೆ ಇನ್ನೂ ಮೂವತ್ತು ದಿನಗಳು ಕಾಯಬೇಕಾಗುತ್ತದೆ.

*ರಚನೆ: ಕುತೂಹಲಿ. (ಮುಂದುವರೆಯುವುದು)*

## ಕಳೆದ ಸಂಚಿಕೆಯ ಬೇತಾಳನ ಪ್ರಶ್ನೆಗೆ ಉತ್ತರ:

ವಿಕ್ರಮ ತಕ್ಷಣವೇ ತನ್ನ ಮೌನ ಮುರಿದು ಉತ್ತರಿಸಿದ. "ಓ ಅದು ಮಾಯಾಟವಲ್ಲ. ಅದು ಫಿಸಿಕ್ಸು. ರಾಕ್ಷಸ ಸುಮ್ಮನೆ ಹೆದರಿಕೊಂಡ" ಎಂದ. ಅವನು ಮೌನವನ್ನು ಮುರಿದ ಕಾರಣ, ಭೇತಾಳ ಅಲ್ಲಿಂದ ಮಾಯವಾಗಿ ಮತ್ತೆ ಮೊದಲಿನಂತೆಯೇ ಆ ಮರಕ್ಕೆ ಹೋಗಿ ನೇತು–ಕೊಂಡಿತು. (ಕಥೆಯನ್ನು ಓದಿಲ್ಲದಿದ್ದರೆ ಇಲ್ಲಿ ಓದಿ? https://bit.ly/3vGQt7H)

ಹೌದು! ವಿಕ್ರಮನಿಗೆ ಕಂಡ ಫಿಸಿಕ್ಸು ಏನು? ಇದೋ ಕಳೆದ ತಿಂಗಳ ಕಥೆಯಲ್ಲಿ ಬೇತಾಳ ಕೇಳಿದ ಸಮಸ್ಯೆಗೆ ವಿಕ್ರಮ ಹೇಳಿದ ಉತ್ತರ ಇದು.

"ಚಾಲಾಕಿ ಹುಡುಗ ಉರಿ ಹೆಚ್ಚಿಸಲು ಜೋರಾಗಿ ಊದಿದ್ದ. ಬೆಂಕಿ ಹೊತ್ತಿಕೊಂಡಿತ್ತು. ಅದೇ ರೀತಿ ಸುಟ್ಟು, ಬಿಸಿ, ಬಿಸಿಯಾದ ಗೆಣಸನ್ನು ಆರಿಸಲೂ ಬಾಯಿಯಿಂದ ಗಾಳಿ ಊದಿದ್ದ. ಇದು ರಾಕ್ಷಸನಿಗೆ ವಿಚಿತ್ರ ಎನ್ನಿಸಿತ್ತು. ಆದರೆ ಇದರಲ್ಲಿ ಮಾಯವೇನೂ ಇಲ್ಲ. ಎಲ್ಲವೂ ಫಿಸಿಕ್ಸು.

ಪುರುಳೆಗಳು ಚೆನ್ನಾಗಿ ಉರಿಯಬೇಕೆಂದರೆ ಗಾಳಿ ಬೇಕು. ಅವು ಅರ್ಧಂಬರ್ಧ ಉರಿದಾಗ ಉಂಟಾಗುವ ಕಾರ್ಬನ್ ಡಯಾಕ್ಸೈಡು ಉರಿ ಹೆಚ್ಚಲು ಬಿಡುವುದಿಲ್ಲ. ಅದನ್ನು ಚದುರಿಸಲು ಜೋರಾಗಿ ಊದಿದರೆ ಆಗ ಬೆಂಕಿಗೆ ಗಾಳಿಯಲ್ಲಿರುವ ಆಕ್ಸಿಜನ್ ದೊರಕಿ, ಜ್ವಾಲೆ ಹೆಚ್ಚುತ್ತದೆ. ಬಾಯಿಯಿಂದ ಊದಿದ್ದೇನೂ ಬೆಂಕಿಗೆ ಬಿಸಿ ಸೇರಿಸುವುದಿಲ್ಲ.

ಇನ್ನು ಗೆಣಸನ್ನು ಆರಿಸುವ ವಿಚಾರ. ಬಿಸಿ, ಬಿಸಿ ಗೆಣಸಿಗೆ ಅಂಟಿಕೊಂಡಂತೆ ಇರುವ ಗಾಳಿ ಸ್ವಲ್ಪ ಬಿಸಿಯೇರುತ್ತದೆಯಷ್ಟೆ. ಹೀಗೆ ಬಿಸಿಯಾದ ಗಾಳಿ ಅಲ್ಲಿಂದ ಚದುರದವರೆಗೂ, ಗೆಣಸಿನಲ್ಲಿ ಇರುವ ಶಾಖ ಹೊರ ಬರಲು ಅವಕಾಶ ಇರುವುದಿಲ್ಲ. ಅದನ್ನು ಊದುತ್ತಿದ್ದರೆ, ಬಿಸಿ ಗಾಳಿ ಚದುರಿ, ಗೆಣಸಿನಲ್ಲಿರುವ ಉಷ್ಣ ಬೇಗ ಕಡಿಮೆ ಆಗುತ್ತದೆ. ಹೀಗೆ ಊದುವುದರಿಂದ ಗಾಳಿಯಲ್ಲಿ ಉಷ್ಣ ಸಂವಹನ ಕ್ರಿಯೆ ಸರಾಗವಾಗಿ ನಡೆಯಲು ಅನುಕೂಲವಾಗುತ್ತದೆ."

ವಿಕ್ರಮ ಹೇಳಿದ ಉತ್ತರ ಸರಿಯೋ ತಪ್ಪೋ ಗೊತ್ತಿಲ್ಲ. ಆದರೆ ಅವನು ಮೌನ ಮುರಿದದ್ದರಿಂದ ಬೇತಾಳ ಅಲ್ಲಿಂದ ಹಾರಿ ತಾನು ಆ ಮೊದಲು ಜೋತುಕೊಂಡಿದ್ದ ಮರಕ್ಕೆ ಹೋಗಿ ನೇತಾಡತೊಡಗಿತು.

ರಚನೆ ಮತ್ತು ವಿನ್ಯಾಸ: ಆನಂದಮೈಡ್ ಮೀಡಿಯಾ ಪ್ರೈವೇಟ್ ಲಿಮಿಟೆಡ್, ಬೆಂಗಳೂರು